# ಅಚಲ

ದ್ವೈಮಾಸಿಕ, ಸೆಪ್ಟೆಂಬರ್ 1996






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

ಸಂಪುಟ : 12 ಸಂಚಿಕೆ : 4

"ಅ ಚ ಲ" ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಇಪ್ಪತ್ತೈದು ರೂಪಾಯಿ ಗಳನ್ನು ಎಂ. ಓ/ಡ್ರಾಫ್ಟ್ ಮೂಲಕ ಕಳುಹಿಸಿ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯ ಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

**ಲೇಖನ, ಹಣ ಕಳುಹಿಸಬೇಕಾದ ವಿಳಾಸ:—**

ಸಂಪಾದಕರು, 'ಅಚಲ'
ಬಿ–30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್,
9ನೇ ಕ್ರಾಸ್, ಒಂದನೇ ಮೇನ್
ವಿಜಯನಗರ 2ನೇ ಹಂತ
ಬೆಂಗಳೂರು–560 040



ಆತ್ಮೀಯರೇ,

'ಅಚಲ' ನಿಮ್ಮ ಪತ್ರಿಕೆ. ಇದನ್ನು ಉಳಿಸಿ ಬೆಳೆಸುವುದು ಚಂದಾದಾರರ, ಲೇಖಕರ ಹಾಗೂ ಹಿತೈಷಿಗಳ ಕೈಯಲ್ಲಿದೆ. ಈ ಪತ್ರಿಕೆ ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಸಶಕ್ತವಾಗಿ ಬರಲು ಹೆಚ್ಚಿನ ಚಂದಾದಾರರ, ವಿಚಾರವಂತ ಲೇಖಕರ ಹೆಚ್ಚಿನ ಸಹಕಾರದ ಅಗತ್ಯವಿದೆ. ಅಷ್ಟೇ ಅಲ್ಲ, ಓದುಗರ ಟೀಕೆ, ಟಿಪ್ಪಣಿಗಳು ಪತ್ರಿಕೆಯನ್ನು ಬೆಳೆಸುತ್ತದೆ ; ತಿದ್ದುತ್ತದೆ. ಇದಕ್ಕೆ ಹೃತ್ಪೂರ್ವಕವಾದ ಸ್ವಾಗತವಿದೆ.

ಚಂದಾ ನವೀಕರಿಸಿ. ನಿಮ್ಮ ಸ್ನೇಹವಲಯಕ್ಕೂ 'ಅಚಲ' ಪರಿಚಯಿಸಿ. ಎಂ.ಓ. ಮೂಲಕ ಚಂದಾದಾರರಾಗುವವರಲ್ಲಿ ವಿಶೇಷ ವಿನಂತಿ. ಎಂ.ಓ. ಫಾರಂನಲ್ಲಿ ತಪ್ಪದೆ ನಿಮ್ಮ ವಿಳಾಸ ಬರೆಯಿರಿ. ಹೀಗೆ ವಿಳಾಸ ಬರೆಯದೆ, ಹಣ ಸಂದಾಯ ಮಾಡುತ್ತಿರುವ ಪ್ರಕರಣಗಳು ಈಗ ಹೆಚ್ಚುತ್ತಿವೆ. ದಯವಿಟ್ಟು ಮರೆಯದೆ ನಿಮ್ಮ ವಿಳಾಸ ಬರೆಯಿರಿ.

—ಸಂಪಾದಕರು

ಚಂದಾ ವಿವರ :

| | | |
|---|---|---|
| ವಾರ್ಷಿಕ ಚಂದಾ | : | 25 ರೂ. |
| ಆಜೀವ ಚಂದಾ | : | 200 ರೂ. |
| ಸಂಸ್ಥೆಗಳಿಗೆ | : | 250 ರೂ. |

**Printed at Rohini Printers
Cottonpet, Bangalore-50.
Published by Dr. G. Ramakrishna on behalf of Jagruthi Mahila Adhyayana Kendra, Bangalore.
Editor—N. Gayathri**

# ಸಂಪಾದಕೀಯ

## ಬೇಲಿಯೇ ಎದ್ದು ಹೊಲವಾ ಮೇಯ್ದರೆ....

—ಎಸ್. ಗಾಯತ್ರಿ

ಅತ್ಯಾಚಾರ, ವಧೂ ದಹನ, ಕನ್ಯಾಪಹರಣ, ಹೆಣ್ಣುಮಕ್ಕಳಿಗೆ ಕೀಟಲೆ ಮಾಡುವುವು, ಇತ್ಯಾದಿಗಳು ಹೆಚ್ಚುತ್ತಿರುವ ಈ ದಿನಗಳಲ್ಲಿ ಪೋಲಿಸ್ ಯಂತ್ರ ಎಷ್ಟು ಯಶಸ್ವಿಯಾಗಿ ಕೆಲಸ ಮಾಡಿದರೂ ಸಾಲದು. ಹೆಣ್ಣಾಗಿ ಹುಟ್ಟಿದ ಕಾರಣಕ್ಕಷ್ಟೇ ಪುರುಷನ ಅಹಂಕಾರಕ್ಕೆ, ಕೀಟಲೆಗೆ, ಲೈಂಗಿಕ ತೃಷೆಗೆ ಬಲಿಯಾಗಬೇಕಾದಂತಹ ವ್ಯವಸ್ಥೆಯಿರುವ ನಮ್ಮ ಸಮಾಜದಲ್ಲಿ ಕಾನೂನು ಮತ್ತು ಶಾಂತಿ ಪಾಲಕರಾದ ಪೋಲಿಸಿನವರೇ ದೌರ್ಜನ್ಯಗಳನ್ನು ಎಸಗಿದರೆ ಹೆಣ್ಣಿನ ರಕ್ಷಣೆಯ ಗತಿ ಏನಾಗಬೇಡ ? ಮಾಯಾತ್ಯಾಗಿ, ರಮೀಜಾಬಿ ಪ್ರಕರಣಗಳಲ್ಲಿ ಪೋಲಿಸ್‌ನವರ ಪಾತ್ರ ಏನು ಎಂಬುದು ಜನಮನದಲ್ಲಿ ಇನ್ನೂ ಮರೆಯಾಗುವುದಕ್ಕೆ ಮುನ್ನವೆ ಅಂತಹ ಹಲವಾರು ಪ್ರಕರಣಗಳು ನಡೆಯುತ್ತಾ ಸಾಗಿವೆ.

ಭಯೋತ್ಪಾದಕರಿಗೆ ಸಿಂಹಸ್ವಪ್ನವಾಗಿ ಪಂಜಾಬಿನ ಭಯೋತ್ಪಾದಕರನ್ನು ಸದೆಬಡಿದು ದಕ್ಷ ಪೋಲಿಸ್ ಅಧಿಕಾರಿ ಎನಿಸಿಕೊಂಡವ ವೀರಾಧಿವೀರ ಕೆ. ಪಿ. ಎಸ್. ಗಿಲ್. ಈ ಮಹಾಶಯನ ಪೌರುಷದ ಬಿಸಿಗೆ ಅಪರಾಧಿಗಳಲ್ಲದ ಹಲವಾರು ಅಮಾಯಕರೂ ಬಲಿಯಾದುದುಂಟು. ಅದೇನೇ ಇರಲಿ, ಭಯೋತ್ಪಾದಕರ ನಿರ್ಮೂಲನದ ಮಹತ್ಕಾರ್ಯ ಮಾಡಿದ ಈ ವೀರನಿಗೆ ಸರಕಾರದ ಕೃಪಾಕಟಾಕ್ಷ; ಪದ್ಮಶ್ರೀ ಪುರಸ್ಕಾರ. ಈ ಎಲ್ಲ ಪ್ರಶಸ್ತಿ, ಪುರಸ್ಕಾರಗಳು ವ್ಯಕ್ತಿಯ ಅಸಭ್ಯ ನಡತೆಯನ್ನು ಮುಚ್ಚಿಹಾಕಬಲ್ಲುವೆ? ಕರ್ತವ್ಯನಿರತನಾದಾಗ ಏನೇ ದಕ್ಷತೆ ತೋರಿದರೂ, ಸಾರ್ವಜನಿಕ ಸಮಾರಂಭಗಳಲ್ಲಿ ಕುಡಿದು ಅಸಭ್ಯವಾಗಿ ವರ್ತಿಸುವುದು ಗಿಲ್‌ರವರ ನಿತ್ಯ ವ್ಯವಹಾರ. ಈತನ ಈ ರೂಢಿಗೆ ಹಲವಾರು ಹೆಣ್ಣುಗಳು ಬಲಿಯಾಗಿದ್ದರೂ, ಐ.ಎ.ಎಸ್. ಅಧಿಕಾರಿಣಿ ರೂಪನ್ ಬಜಾಜ್ ಬಲಿಯಾದಾಗ ಈ ಪ್ರಕರಣಕ್ಕೆ ಹೊಸ ತಿರುವೊಂದು ಸಿಕ್ಕಿದೆ.

ಎಂಟು ವರ್ಷಗಳ ಹಿಂದೆ ಸಾರ್ವಜನಿಕ ಸಮಾರಂಭವೊಂದರಲ್ಲಿ ಎಲ್ಲರ ಸಮ್ಮುಖದಲ್ಲಿ ಹಿರಿಯ ಪೋಲಿಸ್ ಅಧಿಕಾರಿ ಕೆ. ಪಿ. ಎಸ್. ಗಿಲ್ ಮಹಿಳಾ ಐ.ಎ.ಎಸ್. ಅಧಿಕಾರಿ ರೂಪನ್ ಬಜಾಜ್‌ಳ ಮೇಲೆ ಕೈಮಾಡಿ ಅಸಭ್ಯವಾಗಿ ವರ್ತಿಸಿದಾಗ ಅಲ್ಲಿದ್ದ ಆಹ್ವಾನಿತರ ಪತ್ನಿಯರು, ಅತಿಥಿಗಳು, ಅನೇಕ ಪತ್ರಿಕೋದ್ಯಮಿಗಳು ಈ ಘಟನೆಗೆ ಸಾಕ್ಷಿಯಾಗಿದ್ದರು. ಸಾರ್ವಜನಿಕವಾಗಿ ನಡೆದ ಇಂತಹ ಅಪಮಾನದ ಪ್ರಕರಣದಲ್ಲೂ ಮಹಿಳೆಗೆ ನ್ಯಾಯ ಸಿಕ್ಕುವುದು ತಡವಾದರೆ ಈ ದೇಶದ ನ್ಯಾಯ ವ್ಯವಸ್ಥೆಯಲ್ಲಿ ಭರವಸೆ ಮೂಡುವುದು ಹೇಗೆ ? ಎಂಟು ವರ್ಷಗಳ ನಂತರ ಅಪಾರ ಹಣ, ಶ್ರಮ, ನೆಮ್ಮದಿಯನ್ನು ಕಳೆದುಕೊಂಡು ಹೋರಾಟ ನಡೆಸಿದ ರೂಪನ್ ಬಜಾಜ್‌ಗೆ ಇತ್ತೀಚೆಗೆ ಚೀಫ್ ಜುಡಿಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯದಲ್ಲಿ ಕೆ. ಪಿ. ಎಸ್. ಗಿಲ್‌ನ ಅಪರಾಧವು ಸಾಬೀತಾಗಿ 500 ರೂ.ಗಳ ದಂಡ ಮತ್ತು ಮೂರು ತಿಂಗಳ ಕಠಿಣ ಕಾರಾಗೃಹವಾಸದ ಶಿಕ್ಷೆ (345 IPC ಸೆಕ್ಷನ್ ಪ್ರಕಾರ), 200 ರೂ.ಗಳ ದಂಡ ಮತ್ತು ಎರಡು ತಿಂಗಳ ಸರಳ ಶಿಕ್ಷೆ (IPC ಸೆಕ್ಷನ್ 509ರ ಪ್ರಕಾರ) ಯನ್ನು ವಿಧಿಸಿದಾಗ ನೆನೆಗುದಿಗೆ ಬಿದ್ದ ಪ್ರಕರಣಕ್ಕೆ ತೆರೆ ಬಿತ್ತು. (ಈಗಾಗಲೇ 'ನ್ಯಾಯ' ಕೋರಿ ಕೆ. ಪಿ. ಎಸ್. ಗಿಲ್ ಮೇಲಿನ ನ್ಯಾಯಾಲಯಗಳಿಗೆ ಅರ್ಜಿ ಸಲ್ಲಿಸಿದ್ದೂ ಆಗಿದೆ.)

ರೂಪನ್ ಬಜಾಜ್‌ಳ ಈ ಪ್ರಕರಣ ಸ್ವಾಭಿಮಾನಿ ಹೆಣ್ಣುಮಕ್ಕಳಿಗೆ ಭರವಸೆ ಮೂಡಿಸಿದೆ. ಮಹಿಳಾ ಸಂಘಟಕರಿಗೆ, ನ್ಯಾಯಾಕಾಂಕ್ಷಿಗಳಿಗೆ ಕಿಂಚಿತ್ ಆದರೂ ಆಶಾಜ್ಯೋತಿಯನ್ನು ಮೂಡಿಸಿದೆ. ಇಷ್ಟಾದರೂ ಕೆಲವೊಂದು

ಪತ್ರಿಕೆಗಳನ್ನು ಬಿಟ್ಟರೆ ಬಹಳಷ್ಟು ಪತ್ರಿಕೆಗಳು ಮತ್ತು ಮಾಧ್ಯಮ ಇದನ್ನು ಅಲ್ಪವಾಗಿ ಕಂಡಿರುವುದಷ್ಟೇ ಅಲ್ಲದೆ ರೂಪನ್ ತನ್ನ ಪ್ರಚಾರಕ್ಕಾಗಿ ಮಾಡಿಕೊಂಡ ಸ್ಟಂಟ್ ಎಂದು ಭಾವಿಸಿ ವಿಷಯದ ಗಂಭೀರತೆಯನ್ನು ಲಘುವಾಗಿಸಿವೆ. ಇದು ನಮ್ಮ ಮುಂದೆ ಹಲವಾರು ಪ್ರಶ್ನೆಗಳನ್ನು ಉಳಿಸುತ್ತದೆ.

'ಭಾರತದ ಪ್ರಸಿದ್ಧ, ದಕ್ಷ, ಪೋಲಿಸ್ ಅಧಿಕಾರಿ ಹೆಣ್ಣೊಬ್ಬಳ ನಿತಂಬದ ಮೇಲೆ ಹೊಡೆದದ್ದಕ್ಕೆ ಜೈಲಿಗೆ ಹೋದ,' ಎಂಬ ಕ್ಷುಲ್ಲಕ ಸುದ್ದಿಯೂ ವಿಶ್ವದ ಮಾಧ್ಯಮದಲ್ಲಿ ಮಹತ್ವದ ಸುದ್ದಿಯಾಗಿಬಿಡುತ್ತದೆ. ಇಂತಹ ಸುದ್ದಿಗೆ ಕಾರಣವಾಗಿ ಒಬ್ಬ ಅಪರಿಚಿತ ಮಹಿಳೆ ವಿಶ್ವದ ಕಣ್ಣಿನಲ್ಲಿ ಹಿರೋಯಿನ್ ಆಗಿ ಕಂಗೊಳಿಸಿದ್ದಾಳೆ—ಎಂಬಂತಹ ಆಕ್ಷೇಪಣೆ ಹಲವಾರು ಪತ್ರಿಕೆಗಳು ಎತ್ತಿವೆ. ಹೀಗೆ ಎತ್ತುವುದರ ಮೂಲಕ ಪೋಲಿಸ್ ಅಧಿಕಾರಿ ಹೊಡೆದದ್ದು ಕ್ಷುಲ್ಲಕವೋ, ಹೊಡೆಸಿಕೊಂಡ ಅಧಿಕಾರಿ ನ್ಯಾಯಕ್ಕಾಗಿ ನ್ಯಾಯಾಲಯದ ಬಾಗಿಲು ಬಡೆದದ್ದು ಕ್ಷುಲ್ಲಕವೋ ಅರ್ಥವಾಗುವುದಿಲ್ಲ. ಉದ್ಯೋಗಸ್ಥ ಮಹಿಳೆ ತನ್ನ ಉಳಿದೆಲ್ಲ ಕೌಟುಂಬಿಕ, ಸಾಮಾಜಿಕ ಸಮಸ್ಯೆಗಳೊಂದಿಗೆ ದುಡಿವ ಪರಿಸರದಲ್ಲಿ ಎದುರಾಗುವ ಲೈಂಗಿಕ ಕಿರುಕುಳಗಳಿಗೂ ತಲೆಯೊಡ್ಡಬೇಕಾಗುತ್ತದೆ. ದೂರೊಪ್ಪಿಸುವ ಮಹಿಳೆಯ ನಡತೆಯಲ್ಲೇ ಕುಂದನ್ನು ಹುಡುಕುವ ನಮ್ಮ ಸಮಾಜಕ್ಕೆ ಪುರುಷನ ಈ ಚೇಷ್ಟೆಗಳೆಲ್ಲಾ ಅನಿವಾರ್ಯ ನಡೆವಳಿಕೆಗಳಾಗಿ ಕಾಣುತ್ತವೆ. ಇಲ್ಲವೇ ಗಂಡಸಿನ ಅಂತಹ ಚೇಷ್ಟೆಗಳಿಗೆ ಹೆಣ್ಣೇ ಪ್ರಚೋದಿಸಿರಬೇಕೆಂಬ ಗುಮಾನಿ ಬೇರೆ. ಈ ಎಲ್ಲಾ ಅಡೆತಡೆಗಳನ್ನು ಗೆದ್ದು ಅಂತೂ ಹೋರಾಡಬಲ್ಲ ಛಲ, ಸಾಮರ್ಥ್ಯ ಪಡೆದುಕೊಂಡ ಮಹಿಳೆಯ ವ್ಯಕ್ತಿತ್ವದ ಮೇಲೆ ಗೂಬೆ ಕೂರಿಸುವ ಪ್ರಯತ್ನ.

ರೂಪನ್‌ಳಿಗೆ ಗಿಲ್ ಉಂಟುಮಾಡಿದ ಅವಮಾನ ಅತ್ಯಂತ ಕ್ಷುಲ್ಲಕವೆಂದು ವಾದಿಸುವವರು ಕರಕಲಾಗುತ್ತಿರುವ ಹೆಣ್ಣುಮಕ್ಕಳ ದೌರ್ಜನ್ಯಕ್ಕೆ ರೂಪನ್‌ಳಿಗಾದ ಅನ್ಯಾಯವನ್ನು ಹೋಲಿಸುವುದು ಸರಿಯಲ್ಲ. ಹಾಗೆಯೇ ಬಸ್‌ಗಳಲ್ಲಿ ಪ್ರಯಾಣ ಮಾಡುವಾಗ, ಚಿತ್ರಮಂದಿರಗಳಲ್ಲಿ ಇಂತಹುದೇ ಕೀಟಲೆಗಳನ್ನು ಪುರುಷರು ಮಾಡುತ್ತಾರೆನ್ನುವುದು ನಿಜವಾದರೂ ಸಹೋದ್ಯೋಗಿಯಾದವರೊಬ್ಬರಿಗೆ ಎಲ್ಲರ ಸಮ್ಮುಖದಲ್ಲಿ ಅಪಮಾನ ಮಾಡಬಲ್ಲ ಧಾರ್ಷ್ಟ್ಯವಿರುವ ವ್ಯಕ್ತಿ ಏನನ್ನು ಮಾಡಲು ತಾನೆ ಹಿಂಜರಿಯುವುದಿಲ್ಲ? ರೂಪನ್ ಹೇಳುವಂತೆ, "ಗಿಲ್ ಮಾಡಿರುವ ಕೃತ್ಯ ಸಣ್ಣದಲ್ಲ. ಏಕೆಂದರೆ ಅವನೇನು ಬಿಸಿ ರಕ್ತದ ತರುಣನಲ್ಲ. ಕಾನೂನು ಮತ್ತು ಶಿಸ್ತನ್ನು ಕಾಪಾಡಬೇಕಾದ ಹಿರಿಯ ಅಧಿಕಾರಿ. ಬೇರೆಯವರಿಗೆ ಕಾನೂನು ಪಾಲಿಸಲು ಹೇಳುವುದಷ್ಟೇ ಅಲ್ಲ ಅದನ್ನು ತಾನೇ ಸ್ವತಃ ಪಾಲಿಸಿ ತೋರಿಸಬೇಕಾದಾತ", ಎನ್ನುವುದು ಈ ಪ್ರಕರಣದ ಗಂಭೀರತೆಯನ್ನು ಸೂಚಿಸುತ್ತದೆ.

ಇಂದು ನ್ಯಾಯಾಲಯದಲ್ಲಿ ನ್ಯಾಯವನ್ನು ಕೇಳಿ ನಿಂತ ಹಲವಾರು ಪ್ರಕರಣಗಳು ವಿಲಂಬವಾಗಿವೆ, ನಿಜ. ಅತ್ಯಂತ ಗಂಭೀರ ಸ್ವರೂಪದ ನ್ಯಾಯ ಅಪೇಕ್ಷಿಸುವ ಪ್ರಕರಣಗಳಿದ್ದರೂ ರೂಪನ್ ಬಜಾಜ್ ಅನವಶ್ಯಕವಾಗಿ ಸುದ್ದಿ ಮಾಡಿದರು ಎನ್ನುವುದು ಒಪ್ಪದ ಮಾತು. ಹಾಗೆಯೇ ನ್ಯಾಯಾಲಯಗಳು ತಮ್ಮೆಲ್ಲ ಕುಂದುಕೊರತೆಗಳ ನಡುವೆಯೂ ಅಲ್ಲೊಂದು ಇಲ್ಲೊಂದು ಇಂತಹ ಪ್ರಗತಿಕಾರಕ ತೀರ್ಪುಗಳನ್ನು ನೀಡುತ್ತಾ ಬಂದಿರುವುದು ಸಂತೋಷದ ವಿಷಯ. ಕೆಲವು ವರ್ಷಗಳ ಹಿಂದೆ ದುಡಿಯುವ ಕ್ಷೇತ್ರದಲ್ಲಿ ಮಹಿಳೆಯ ಮೇಲೆ ಆದ ಹಲ್ಲೆ ಇಡೀ ಅಮೆರಿಕಾ ರಾಜಕೀಯದಲ್ಲೇ ಎಂತಹ ಮಹತ್ವದ ಸುದ್ದಿಯಾಯಿತು ಎಂಬುದನ್ನು ಇಲ್ಲಿ ಗಮನಕ್ಕೆ ತಂದುಕೊಳ್ಳಬೇಕು.

ರೂಪನ್ ಬಜಾಜ್ ಗಳಿಸಿದ ಈ ವಿಜಯ ಒಬ್ಬ ಮಹಿಳೆ ಮತ್ತೊಬ್ಬ ಪುರುಷನ ವಿರುದ್ಧ ಗಳಿಸಿದ ವಿಜಯವಾಗಿರದೆ, ನ್ಯಾಯವನ್ನು ಕೇಳದಂತೆ ತಣ್ಣೀರು ಎರಚಿ ಪ್ರೋತ್ಸಾಹಿಸದ ವ್ಯವಸ್ಥೆಯ ವಿರುದ್ಧದ ಹೋರಾಟ ಎಂಬಂತೆ ರೂಪನ್ ತಮ್ಮ ಹೋರಾಟವನ್ನು ವ್ಯಾಖ್ಯಾನಿಸಿಕೊಳ್ಳುತ್ತಾರೆ. ಹೆಣ್ಣು ತನ್ನ ಮರ್ಯಾದೆ, ಶೀಲ ಮತ್ತು ಸಾರ್ವಜನಿಕ ಅಭಿಪ್ರಾಯಗಳಿಗೆ ಹೆಚ್ಚು ಬೆಲೆ ಕೊಟ್ಟು ಪುರುಷರ ಎಲ್ಲ ಚೇಷ್ಟೆಗಳನ್ನು ಸಹಿಸಿಕೊಳ್ಳುತ್ತಾಳೆ ಎಂಬ ಪುರಾಣವನ್ನೇ ಈ ಪ್ರಕರಣ ಸುಳ್ಳುಮಾಡಿ ಪ್ರತಿಯೊಬ್ಬ ಹೆಣ್ಣುಮಕ್ಕಳಲ್ಲೂ ಧೈರ್ಯವನ್ನು ತುಂಬಲಿದೆ.

ಇನ್ನು ಇಂತಹ ಹೋರಾಟವನ್ನು ಸವಲತ್ತು ಪಡೆದ ಮಹಿಳೆಯರಿಗೆ ಮಾತ್ರ ಸಾಧ್ಯವಾಗಬಹುದಾದ ಮತ್ತು ವಿದ್ಯಾವಂತ ಮಹಿಳೆಯರ ಹೋರಾಟ ಮಾತ್ರ ಎಂದು ಹೇಳಿ ಇದರ ಪ್ರಾಮುಖ್ಯತೆಯನ್ನು ಅಲ್ಲಗಳೆಯುವವರು ನಮ್ಮೊಡನಿದ್ದಾರೆ. ಆದರೆ ಇಂತಹದೊಂದು ಪ್ರವೃತ್ತಿ ಸಾಹಿತ್ಯ ಕ್ಷೇತ್ರದಲ್ಲಾಗಲೀ, ಸಾಂಸ್ಕೃತಿಕ ಜಗತ್ತಿನಲ್ಲಾಗಲೀ ಇರುವಂತೆ ಇಲ್ಲಿಯೂ ಅಂತಹ ಟೀಕೆಗಳು ಬಂದರೆ ಆಶ್ಚರ್ಯವಿಲ್ಲ. ಆದರೆ ಮಹಿಳೆಯೊಬ್ಬಳು ತನ್ನನ್ನು ಲೈಂಗಿಕ ಸರಕಾಗಿ

ಕಾಣುವ, ತನ್ನ ಮೇಲೆ ಯಾರಾದರೂ ಅಧಿಕಾರ ಸ್ಥಾಪಿಸಬಹುದೆಂಬ, ನಿಲುವು ತಾಳುವ ಪ್ರವೃತ್ತಿಗಳ ವಿರುದ್ಧ ಹೋರಾಡಲೇಬೇಕಾಗುವುದು ಅವಳ ಮೊದಲ ಆದ್ಯತೆಯಾಗುತ್ತದೆ. ಇಂತಹ ಹೋರಾಟವನ್ನು ಮಾಡಿದ ರೂಪನ್ ಬಜಾಜ್ ಎಲ್ಲರ ಅಭಿನಂದನೆಗೆ ಪಾತ್ರರು.

ರೂಪನ್‌ಗೆ ಸರಕಾರದ ಕೃಪಾಕಟಾಕ್ಷಕ್ಕೆ ಪಾತ್ರರಾದ ಕೆ. ಪಿ. ಎಸ್. ಗಿಲ್ ವಿರುದ್ಧದ ಹೋರಾಟದ ಹಾದಿ ಅಷ್ಟು ಸುಗಮವಾಗಿರಲಿಲ್ಲ. ಸರಕಾರದ ವಿರೋಧ, ಕೇಸು ಹಿಂತೆಗೆದುಕೊಳ್ಳಲು ಹಿಂತೆಗೆಯುವ ಲಾಯರುಗಳು, ಮಾನಸಿಕ ಚಿತ್ರಹಿಂಸೆ, ಆರ್ಥಿಕ ಮುಗ್ಗಟ್ಟು, ಸಾವಿನ ಬೆದರಿಕೆ ಎಲ್ಲವೂ ಇತ್ತು. ಈ ಎಲ್ಲವನ್ನೂ ಮೆಟ್ಟಿ ನಿಂತು ಹೋರಾಡಿ ಜಯ ಸಿಕ್ಕಿತೆಂಬ ನೆಮ್ಮದಿ ತಲುಪಿದಾಗಲೂ ಧುತ್ತೆಂದು ಕಷ್ಟಗಳು ಈಗ ಅವರಿಗೆ ಎದುರಾಗಿವೆ. ಭೂ ವಿವಾದದಲ್ಲಿ ಅವರನ್ನು ಸಿಕ್ಕಿಸಿ ಮತ್ತಷ್ಟು ತೊಂದರೆ ಕೊಡುವ ಪ್ರಯತ್ನಗಳು ನಡೆಯುತ್ತಿವೆ. ಹಿಂದೆ ಎಂದೂ ಇರದಿದ್ದ ಭೂವಿವಾದದ ಪ್ರಕರಣವನ್ನು ರಾಜೇಂದ್ರ ಸಿಂಗ್ ಎಂಬ ಬಡ ಮುದುಕನು ರೂಪನ್ ಬಜಾಜ್ ಅವರ ಮೇಲೆ ಹಾಕಿದ್ದಾನೆ. ಕರಾರ್ ಪೋಲಿಸ್ ಠಾಣೆಯಲ್ಲಿ ರೂಪನ್‌ಳು ರಾಜೇಂದ್ರಸಿಂಗ್‌ರ ಮನೆಯನ್ನು ಅನಧಿಕೃತವಾಗಿ ಆಕ್ರಮಿಸಿ, ತೊಂದರೆ ಕೊಡುತ್ತಿದ್ದಾರೆ ಎಂಬ ದೂರು ದಾಖಲಾಗಿದೆ. ಸಿಂಹವನ್ನು ಕೆಣಕಿದ್ದಕ್ಕೆ ರೂಪನ್ ಪಡೆದ ಬಹುಮಾನ ಇದು ಎನ್ನೋಣವೇ ?

ಹೊಲ ಕಾಯುವ ಬೇಲಿಯೇ ಹೊಲವನ್ನು ನುಂಗಲು ಹೊರಟಾಗ ಶಿಕ್ಷೆ ಯಾರಿಗೆ ? ನ್ಯಾಯ ಯಾರಿಗೆ ?

---

(22ನೇ ಪುಟದಿಂದ ಮುಂದುವರಿದಿದೆ)

ಹೋದಳು ಎಂಬ ದುಃಖಕ್ಕಿಂತಾ 'ಹೆಂಡತಿ ಬಿಟ್ಟು ಹೋದಳು' ಎಂಬ ಅವಮಾನ ಜಾಸ್ತಿ. ಇಂದಿಗೂ ಯಾರಲ್ಲೂ ನಾ ಅವರನ್ನು ಬಿಟ್ಟು ಬಂದಿದ್ದೇನೆ ಎಂದು ಹೇಳಿಲ್ಲ.

ಅವರನ್ನೂ ಆಪ್ತ ಸಲಹೆಗೆ ಕರೆದೊಯ್ದೆ. ಆತನಲ್ಲಿ ಎಲ್ಲಿಲ್ಲದ ಕೀಳರಿಮೆ ಇತ್ತು. ಅವರು ಬಂದದ್ದೇ ನನ್ನ ದೂರುತ್ತಾ ಗೋಳು ಹೇಳುತ್ತಾ ಕುಳಿತರು. 'ಕೌನ್ಸೆಲರ್' ಹೇಳಿದ ಯಾವ ಸಲಹೆಯನ್ನೂ ಪಾಲಿಸಲಿಲ್ಲ. ಆದರೆ ಆಪ್ತಸಲಹಾ ಕೇಂದ್ರಕ್ಕೆ ಹೋದಮೇಲೆ ನನಗೆ ಎಲ್ಲಿಲ್ಲದ ಧೈರ್ಯ ಮೂಡಿತು. ನನಗೆ ಸ್ಪಷ್ಟವಿಲ್ಲದ ನನ್ನ ನಿರ್ಧಾರಗಳು, ಗಟ್ಟಿಯಾಗಲು ಸಹಾಯ ಮಾಡಿದರು. ನನ್ನ ಬಹಳಷ್ಟು ರೋಗಗಳು 'ಸೈಕೋಸೊಮ್ಯಾಟಿಕ್' ಎಂದು ತಿಳಿದುಬಂದಿತು. ಇವೆಲ್ಲವೂ ನನ್ನ ದೇಹದ ರೋಗಗಳಾಗಿರದೆ, ಮನಸ್ಸಿಗೆ ಅಂಟಿದ ಕಾಯಿಲೆಗಳು, ದೇಹದಲ್ಲಿ ಅಭಿವ್ಯಕ್ತಿ ಪಡೆದಿದ್ದವು. ಒಂದಷ್ಟು ದಿನ ಖಿನ್ನತೆಯನ್ನು ಕಳೆಯಲು ವೈದ್ಯರು ಹೇಳಿದ ಮಾತ್ರೆಗಳನ್ನೂ ತೆಗೆದುಕೊಂಡೆ. ಕೌನ್ಸೆಲಿಂಗ್‌ನಿಂದ ನನಗೆ ಹೊಸ ಜೀವನ ಸಿಕ್ಕಹಾಗಿತ್ತು. ನನಗೆ ನನ್ನೆದುರಿನ ದಾರಿಗಳು, ನನ್ನ ಆದ್ಯತೆಗಳು ಸ್ಪಷ್ಟವಾದವು. ನಿರ್ಧಾರಗಳನ್ನು ತೆಗೆದುಕೊಳ್ಳುವ ಶಕ್ತಿ ಬಂದಿತು. ತಟ್ಟನೆ ಬದುಕಿನಲ್ಲಿ ಉತ್ಸಾಹ ಕೊನರಿತು. ಸ್ವತಃ ನಾನೇ 'ಕೌನ್ಸೆಲಿಂಗ್' ಕಲಿಯಲು ನಿರ್ಧರಿಸಿ, 'ಪ್ರಸನ್ನ ಆಪ್ತಸಲಹಾ ಕೇಂದ್ರ'ದ ಕೌನ್ಸೆಲಿಂಗ್ ತರಗತಿಗೆ ಸೇರಿದೆ. ನನ್ನ ಚಟುವಟಿಕೆಗಳು ಹೆಚ್ಚಿದಂತೆ, ನನ್ನ ಓಡಾಟದ ಮಿತಿಗಳು ಕಾಡತೊಡಗಿದವು. ಇದೀಗ ಒಂದು ಕೈನೆಟಿಕ್ ಹೊಂಡಾ ಕೊಂಡು, ಗಾಲಿ ಕೂಡಿಸಿ, ಚಲಿಸಲು ಎರಡೇ ದಿನದಲ್ಲಿ ಕಲಿತು, ರಾತ್ರಿ ಹೊತ್ತಿನಲ್ಲೂ ಹತ್ತು ಕಿಲೋಮಿಟರ್ ದೂರ ಇರುವ ನನ್ನ ಕೌನ್ಸೆಲಿಗೆ ತರಗತಿಗೆ ವಾಹನದಲ್ಲಿ ಹೊರಟು ಬಂದೆ. ಇದೀಗ ನನಗೆ ಓಡಾಟದ ಸಮಸ್ಯೆಯೇ ಕಳೆದುಹೋಗಿದೆ. ಯಾರ ನೆರವು, ಆಸರೆ, ಅವಲಂಬನೆಯ ಅಗತ್ಯ ನನಗಿಲ್ಲ.

ಇಂದು ನನಗೆ ನನ್ನ ಸಮಸ್ಯೆಗಳು ದೊಡ್ಡದಾಗಿ ಕಾಣುವುದಿಲ್ಲ. ಅದು ನನ್ನ ಪೋಲಿಯೋ ಕಾಲಿನದಾಗಿರಬಹುದು, ನನ್ನ ಬೇರ್ಪಟ್ಟ ವಿವಾಹದ್ದೇ ಆಗಿರಬಹುದು. ನನ್ನ ಸಮಸ್ಯೆಗಳೆಲ್ಲ ಮಾಯವಾಗಿವೆ ಎಂದಲ್ಲ. ಆದರೆ ಆ ಸಮಸ್ಯೆಗಳು ನನ್ನ ಮನಸ್ಸು ದೇಹವನ್ನು ಹಿಂಡಿ ಹಿಪ್ಪೆ ಮಾಡಲು ಬಿಡುತ್ತಿಲ್ಲ. ವಾಸ್ತವಕ್ಕೆ ಮುಖಾಮುಖಿಯಾಗಿದ್ದೇನೆ. ವಾಸ್ತವವನ್ನು ಸ್ವೀಕರಿಸಿದ್ದೇನೆ. ಸದ್ಯದ ನನ್ನ ಬದುಕನ್ನು ಪೂರ್ಣ ಬದುಕಲು ಹೊರಟಿರುವೆ. ನನ್ನ ಮಗನ ಬದುಕಿಗೆ ಅಮ್ಮ, ಅಪ್ಪ ಎಲ್ಲವೂ ಆಗಿ ಅವನಿಗೊಂದು ಭದ್ರವಾದ ಬಾಲ್ಯವನ್ನು ಕೊಡುವತ್ತ ನನ್ನ ಪ್ರಯತ್ನ ಹರಿಸಿರುವೆ. ಜೀವನದಲ್ಲಿ ಉತ್ಸಾಹ ಮೂಡಿದೆ. ಬರೀ ನನ್ನ ಬಗ್ಗೆಯಷ್ಟೇ ಯೋಚಿಸುತ್ತಿದ್ದ ಮನಸ್ಸು ಈಗ ಇತರರನ್ನು ಕುರಿತು ಯೋಚಿಸುತ್ತದೆ, ಯೋಜಿಸುತ್ತದೆ. ಬಹಳ ದಿನದಿಂದ ಹುಡುಕುತ್ತಿದ್ದ ಶಾಂತಿ ನೆಮ್ಮದಿ ನನ್ನೊಳಗೇ ನನಗೆ ದೊರೆತಿದೆ.

## ಕಾವ್ಯ

# ಪುಣ್ಯವಂತೆಗೆ

ಕಾವ್ಯಾಲಯದ ನೆಲಮಾಳಿಗೆಯಲ್ಲಿ
ಕಗ್ಗತ್ತಲ ಗವಿ, ಹೊದ್ದು ಮಲಗಿದ್ದ ಧೂಳುರಾಶಿ
ಕೊಡವಿ ತೆರೆದಾಗ ಚರಿತ್ರೆ ಪುಟ
ಕಂಗೊಳಿಸಿತ್ತು ಒಂದು ಉಜ್ವಲ ಮುಖ.

ಹತ್ತಿ ಬಿಳುಪಿನ ಕೂದಲಡಿ
ಹಾಲು ಬಿಳುಪಿನ ಪ್ರಸನ್ನತೆ
ನಡುವಲ್ಲಿ ತುಸುವೆ ಬಿಗಿದ ತೆಳುದುಟಿ.
ಕಣ್ಣುಗಳಲ್ಲಿ ಹೊಳೆದದ್ದೇನು
ಯುಗ ಯುಗಾಂತರದ
ಕಟ್ಟೊಡೆಯದ ಅರಿವಿನ ಮೌನ
ಒಳಗೊಳಗೆ ಉರಿ ಆರದ ಚೂಪು ಕುದಿತ.

ಮುಖದಂತೆ ನೇರ ಸರಳತೆಯ
ಪರದೆ ಹಾಕಿದ ಗದ್ಯ
ಹಾಡಿದ್ದು ಹುಡುಗಿಯರ
ಅನಂತ ಬಿಕ್ಕುಗಳ ಬಿತ್ತರ
ಹೊಳೆವ ಕನಸು
ಚಿತ್ರ ಚಿತ್ತಾರದ ಅಂತರಾಳ

ಸೀತೆ, ಮೇನಕೆ, ದಮಯಂತಿ
ಪುರಾಣದ ಗವಿಬಿಟ್ಟು ಬಂದು
ಇಲ್ಲಿ ತಳೆದದ್ದು ಅತ್ಯಾಧುನಿಕ ರೂಪು.
ನೆಲದ ಹೆಣ್ಣುಗಳಿನ್ನೂ ತಲುಪಲಾಗದಂಥ
ವಿಮುಕ್ತ ನೆಲೆಗಳ ಆಯಾಮುಗಳ
ಹಾಸು ಬೀಸು.

ಎಂಬತ್ತರ ಅಜ್ಜಿ ಅಚ್ಚ ಮುತ್ತೈದೆ ರೂಪ
ಮಾತೋ ಅಂದು ಇಂದುಗಳ
ಲೋಕದ ಎಲ್ಲೆಗಳನೆಲ್ಲ ಮುಟ್ಟುವ
ತವಕದ ಹದಮೀರದ ತುಡಿತ.

ತಲೆಗಿಟ್ಟು ಅಭಯದ ಹಸ್ತ
ತಬ್ಬಿ ನಮ್ಮ ಭುಜ ಹರಸಿದಿರಿ ಅಮ್ಮ ನೀವು
ನಿಮ್ಮ ಲೇಖನಿಯಲ್ಲಿ
ಸಾದಾ ಊದಾ ಹಿನ್ನೆಲೆಯಲ್ಲಿ
ಅರಳಿದ್ದ ರೇಖೆಗಳ ನವುರು ಮೊನಚಿಗೆ
ತೆರೆಸಿದಿರಿ ನಮ್ಮ ಕಣ್ಣ
ನೆನೆಯುವೆವು ನಾಡ ಪುಣ್ಯ.

★ ಸುಮಿತ್ರ

(ದಿ॥ ಎಚ್. ವಿ. ಸಾವಿತ್ರಮ್ಮನವರ ಸ್ಮರಣೆಗೆ)

# ಸೋನ್ಯಾ ಕೋವಲೇವ್ಸ್ಕಯಾ 1850-1891

★ ನೇಮಿಚಂದ್ರ

ಅನೇಕ ಪ್ರಥಮಗಳನ್ನು ಸಾಧಿಸಿದ ಮಹಿಳೆ ಸೋನ್ಯಾ ಕೋವಲೇವ್ಸ್ಕಯಾ. ವಿಜ್ಞಾನಿಗಳು ಮತ್ತು ವಿಜ್ಞಾನ ಸಂಸ್ಥೆಗಳು ಕಟು ವಿರೋಧದ ನಡುವೆ ಗಣಿತದಲ್ಲಿ ಡಾಕ್ಟರೇಟ್ ಪದವಿ ಪಡೆದ ಮೊಟ್ಟ ಮೊದಲ ಮಹಿಳೆ ಸೋನ್ಯಾ. ಈಕೆ 1947ರಲ್ಲಿ ಗೊಟಿನಗೆನ್ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆದಳು. ಅಷ್ಟೇ ಅಲ್ಲದೆ ಈಕೆ ಸಂಶೋದನಾ ವಿಶ್ವವಿದ್ಯಾಲಯದ ಮುಖ್ಯಸ್ಥೆಯಾದಳು. ಪ್ರಮುಖ ವೈಜ್ಞಾನಿಕ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ ಸೇರಿದ ಪ್ರಥಮ ಮಹಿಳೆ ಈಕೆ. 'ಆಕ್ಟಾ ಮ್ಯಾಥಮ್ಯಾಟಿಕಾ'ದ ಸಂಪಾದಕ ಮಂಡಳಿಯಲ್ಲಿದ್ದಳು. ಸೋನ್ಯಾ 'ರಷಿಯನ್ ಇಂಪೀರಿಯಲ್ ವಿಜ್ಞಾನ ಅಕಾಡೆಮಿ'ಗೆ ಚುನಾಯಿತಳಾದ ಪ್ರಥಮ ಮಹಿಳೆ.

19ನೇ ಶತಮಾನದ ಮಧ್ಯಭಾಗ, ರಷಿಯಾ ಯಾಂತ್ರಿಕ ಯುಗಕ್ಕೆ ಪ್ರವೇಶಿಸಲು ಪ್ರಯತ್ನಿಸುತ್ತಿತ್ತು. ಇದೇ ಸಮಯದಲ್ಲಿ ಉನ್ನಂತ ವ್ಯಾಸಂಗಕ್ಕೆ ಪ್ರೋತ್ಸಾಹ ದೊರೆತು, ವಿಶ್ವವಿದ್ಯಾಲಯಗಳು ಹೆಚ್ಚಿನ ಸ್ವಾತಂತ್ರವನ್ನು ಪಡೆದವು. ಆದರೆ ಶಿಕ್ಷಣ ರಂಗದ ಈ ಎಲ್ಲಾ ಸುಧಾರಣೆಗಳು ಮಹಿಳೆಯನ್ನು ಮುಟ್ಟಲೇ ಇಲ್ಲ. 1963ರಲ್ಲಿ ರಷಿಯಾದ ವಿಶ್ವವಿದ್ಯಾಲಯಗಳು ಮಹಿಳೆಗೆ ಮುಚ್ಚಿದ್ದವು.

ಸೋನ್ಯಾ 1850ರ ಜನವರಿ ತಿಂಗಳಿನಲ್ಲಿ ಮಾಸ್ಕೋದಲ್ಲಿ ಹುಟ್ಟಿದಳು. ಈಕೆಯ ಬಗ್ಗೆ ಬಹಳಷ್ಟು ಮಾಹಿತಿ ದೊರೆತಿದೆ. ಕಾರಣ, ಸೋನ್ಯಾಳ ಜೀವಿತ 'ಬಾಲ್ಯದ ನೆನಪುಗಳು' (Recollection of Childhood) ಎಂಬ ಪುಸ್ತಕದಲ್ಲಿ ಪ್ರಕಟವಾಗಿದ್ದವು. ರಾಜಕೀಯ ಕಾರಣಗಳಿಂದ ಅದನ್ನು ಆಕೆ ಕಾದಂಬರಿಯ ರೂಪದಲ್ಲಿ ಮರೆಮಾಚಿದ್ದಳು. ಸೋನ್ಯಾಳ ಸಾವಿನ ಸ್ವಲ್ಪ ಸಮಯದ ನಂತರ ಆಕೆಯ ಆತ್ಮೀಯ ಸ್ನೇಹಿತೆ ಸ್ವೀಡನ್ನಿನ ಲೇಖಕಿ ಆನಾ ಕಾರ್ಲೋಟ ಲೆಫ್ಲರ್ ಆಕೆಯ ಜೀವನಕತೆಯನ್ನು ಪೂರ್ಣವಾಗಿ ಬರೆದಿಟ್ಟಳು. ಈ ಎರಡೂ ಪುಸ್ತಕಗಳು ತನ್ನ ಕಾಲದ ಪ್ರಮುಖ ಗಣಿತಜ್ಞೆಯಾಗಿದ್ದ ಸೋನ್ಯಾಳ ಬದುಕಿನ ಶ್ರೀಮಂತ ವಿವರಗಳನ್ನು ನೀಡುತ್ತವೆ.

**ಬಾಲ್ಯ :**

ಮೂರು ಮಕ್ಕಳ ಕುಟುಂಬದಲ್ಲಿ ಈಕೆ ಮಧ್ಯದ ಮಗು. ತನ್ನ ಬಾಲ್ಯದುದ್ದಕ್ಕೂ ಸೋನ್ಯಾ ತನ್ನನ್ನು ಯಾರು ಪ್ರೀತಿಸುತ್ತಿಲ್ಲ' ಎಂಬ ಕ್ಲೇಷದಲ್ಲಿ ಬೆಳೆದಳು. ಆಕೆಯ ಅಕ್ಕ, ಆಕೆಗಿಂತ ಆರು ವರ್ಷ ಹಿರಿಯವಳಿದ್ದು, ಮೊದಲ ಮಗುವೆಂಬ ವಿಶೇಷ ಗಮನವನ್ನು ಪಡೆದು ಕೊಂಡರೆ, ಆಕೆಯ ತಮ್ಮ ಮೂರು ವರ್ಷಕ್ಕೆ ಚಿಕ್ಕವನಿದ್ದು, ಗಂಡು ಮಗುವೆಂಬ ಹೆಮ್ಮೆಗೆ ಪಾತ್ರನಾಗಿದ್ದ. ಇವರಿಬ್ಬರ ನಡುವೆ ಸೋನ್ಯಾ ಆರು ವರ್ಷದವಳಿದ್ದಾಗ, ಆಕೆಯ ತಂದೆ ಫಿರಂಗಿ ದಂಡನಾಯಕನಾಗಿ ನಿವೃತ್ತನಾದನು. ಇಡೀ ಕುಟುಂಬ ಪಲೋಬಿಸೋದಲ್ಲಿದ್ದ ಎಸ್ಟೇಟಿಗೆ ಬಂದಿಳಿಯಿತು. ಈ ಪುರಾತನ ಬಂಗಲೆಯಲ್ಲಿ ಸೋನ್ಯಾ ಬೆಳೆದಳು. ಓರ್ವ ಇಂಗ್ಲೀಷ್ ಮಹಿಳೆಯೇ ಈಕೆಯ ಗವರ್ನೆಸ್. ಈ ಇಂಗ್ಲಿಷ್ ಮಹಿಳೆ ಸೋನ್ಯಾಳನ್ನು ಇಂಗ್ಲಿಷ್ 'ಮಿಸ್' ಮಾಡುವ ಭರದಲ್ಲಿ ಬಗೆ ಬಗೆಯ ಆಧುನಿಕ ಶಿಕ್ಷೆಗಳನ್ನು ಕಂಡು ಹಿಡಿದಳು. ಸೋನ್ಯಾಳ ಯಾವುದೇ ಸಣ್ಣ ಪುಟ್ಟ ತಪ್ಪು ನಡವಳಿಕೆಯನ್ನು ಈಕೆ ವಿವರವಾಗಿ ಬರೆದು ಎಲ್ಲರ ಗಮನ ಸೆಳೆಯುವಂತೆ ಸೋನ್ಯಾಳ ಬೆನ್ನಿಗೆ ಅಂಟಿಸುತ್ತಿದ್ದಳು. ಮೊದಲೇ ಅತಿ ಸೂಕ್ಷ್ಮ ಮನಸ್ಸಿನ ಸೋನ್ಯಾಗೆ ಈ ಮಾನಸಿಕ ಹಿಂಸೆ ವಿಪರೀತವೆನಿಸಿ, ಅವಮಾನದಿಂದ ಕುಗ್ಗಿ ಹೋಗುತ್ತಿದ್ದಳು. ಶಿಕ್ಷಣ ಸೋನ್ಯಾಳ ಪಾಲಿಗೆ ಎಲ್ಲಕ್ಕೂ ಅಡ್ಡಿಯಾಗುವ ನಿಯಂತ್ರಿಸುವ ಪ್ರಕ್ರಿಯೆಯಾಗಿ ಮಾತ್ರ ಉಳಿ

ಯಿತು. ಈ ಸಮಯದಲ್ಲಿ ಆಕೆಯ ಅಂಕಲ್ ಪೀಟರ್ ಈ ಕುಟುಂಬವನ್ನು ಬಹಳಷ್ಟು ಬಾರಿ ಭೇಟಿಯಾಗಲು ಬರುತ್ತಿದ್ದುದು ಸೋನ್ಯಾಳ ಪಾಲಿನ ಸಿಹಿಯ ಕ್ಷಣಗಳು. ಈತನಿಂದ ಸೋನ್ಯಾ ಎಳೆಯ ವಯಸ್ಸಿನಲ್ಲೇ ಗಣಿತದ ಬಗ್ಗೆ ಒಂದು ಬಗೆಯ ಗೌರವ, ಪೂಜನೀಯ ಭಾವ ವನ್ನು ಬೆಳೆಸಿಕೊಂಡಳು. ಈ ಗಣಿತ–ವಿಜ್ಞಾನದ ಅದ್ಭುತ ಲೋಕ ಸಾಮಾನ್ಯರಿಗಲ್ಲ ಎಂಬ ಭಾವ ಮೂಡಿತ್ತು. ಗಣಿತ ಎಂದರೇನು ಎಂದು ತಿಳಿಯುವು ದಕ್ಕೆ ಬಹಳ ಮೊದಲೇ ಗಣಿತದ ಬಗ್ಗೆ ಬೆರಗು ಗೌರವ ಗಳಿದ್ದವು. ಅತ್ಯಂತ ಕುತೂಹಲದ ವಿಷಯವೆಂದರೆ, ಇಡೀ ಕುಟುಂಬ ಇಲ್ಲಿಯ ಬಂಗಲೆಗೆ ಚಲಿಸಿದಾಗ, ಮನೆ ಯನ್ನು ನವೀಕರಿಸುವ ಹೊತ್ತಿನಲ್ಲಿ ಸೋನ್ಯಾಳ ಕೋಣೆಗೆ ಸಾಕಷ್ಟು ಗೋಡೆಗಂಟಿಸುವ ಕಾಗದ ಉಳಿದಿರಲಿಲ್ಲ. ಹಾಗಾಗಿ ತಾತ್ಕಾಲಿಕವಾಗಿ ಆಕೆಯ ತಂದೆಗೆ ಸೇರಿದ ಒಂದಷ್ಟು ಪ್ರವಚನದ ನೋಟುಗಳನ್ನು ಗೋಡೆಗೆ ಅಂಟಿ ಸಿದ್ದರು. ಆ ಹಾಳೆಗಳು ರಷಿಯಾದ ಪ್ರಸಿದ್ಧ ಗಣಿತಜ್ಞನ 'ಕಲನ ಗಣಿತ'ವನ್ನು ಕುರಿತ ಟಿಪ್ಪಣಿಗಳಾಗಿದ್ದವು. ವಿಚಿತ್ರವಾದ, ಅರ್ಥವಾಗದ ಸಮೀಕರಣಗಳನ್ನೊಳ ಗೊಂಡ ಈ ಹಾಳೆಗಳು ಸೋನ್ಯಾಳ ಗಮನ ಸೆಳೆದವು. ಗಂಟೆ ಗಂಟೆಗಳ ಕಾಲ, ಈ ಹಾಳೆಗಳ ರಹಸ್ಯಮಯ ಲಿಪಿ ಯನ್ನು ಅರ್ಥ ಮಾಡಿಕೊಳ್ಳಲು ಅವುಗಳ ಎದುರು ಪುಟ್ಟ ಹುಡುಗಿ ನಿಂತಿರುತ್ತಿದ್ದಳು. ದಿನಾ ನೋಡಿ ನೋಡಿಯೇ ಆ ಅಕ್ಷರಗಳು, ಸಮೀಕರಣಗಳು ಆಕೆಯ ನೆನಪಿನಲ್ಲಿ ಆಳ ವಾದ ಕುರುಹು ಉಳಿಸಲಿದ್ದವು.

ಮುಂದೆ ಸೋನ್ಯಾ ಹದಿನೈದನೇ ವರ್ಷದಲ್ಲಿ ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿ ಅವಕಲನ ಶಾಸ್ತ್ರವನ್ನು (differential calculus) ಕುರಿತು ಮೊದಲ ಪಾಠಗಳನ್ನು ಕಲಿತಳು. ಇಲ್ಲಿ ಆಕೆ ಪಾಠಗಳನ್ನು ಕಲಿವ ವೇಗ ಆಕೆಯ ಪ್ರಾಧ್ಯಾಪಕರನ್ನು ಅಚ್ಚರಿಗೊಳಿಸಿತು. ಸೋನ್ಯಾಗೆ ಅವೆಲ್ಲವೂ ತನಗೆ ಮೊದಲೇ ಗೊತ್ತಿತ್ತು ಎಂಬಂಥ ಭಾವ. ಇಲ್ಲಿ ಆಕೆ ಮಹಿಳಾ ಸಮಾನತೆಗೆ ಹೋರಾಡುವ ಯುವ ಜನರ ಚಳುವಳಿಯ ಭಾಗವಾಗಿ ದ್ದಳು. ಸೋನ್ಯಾ ಹದಿನೇಳು ವರ್ಷದವಳಿದ್ದಾಗ, ಆಕೆ ಮತ್ತು ಆಕೆಯ ಅಕ್ಕ ರಷಿಯಾದ ಸಾಮಾಜಿಕ ಸುಧಾರಣಾ ಚಳುವಳಿಯಲ್ಲಿ ಭಾಗವಹಿಸಿದರು, ಅಂದಿನ ರಷಿಯಾದಲ್ಲಿ ಮಹಿಳೆಯರಿಗೆ ತೆರೆದ ಸೀಮಿತ ಶಿಕ್ಷಣದ ಅವಕಾಶ ಗಳಿಂದಾಗಿ ಮಹಿಳೆಯ ಪಾತ್ರದ ಬಗ್ಗೆ ಈ ಸೋದರಿ ಯರಿಗೆ ವಿಶೇಷ ಆಸಕ್ತಿ ಇತ್ತು. ರಷಿಯಾದಲ್ಲಿ ಮಹಿಳೆ ಪದವೀಧರಳಾಗುವ ಅವಕಾಶವಿರಲಿಲ್ಲ. ರಷಿಯಾದ ಯಾವ ಭಾಗದಲ್ಲಿಯೂ ಅಕ್ಕ–ತಂಗಿಯರಿಬ್ಬರೂ ತಮ್ಮ ವ್ಯಾಸಂಗ ಮುಂದುವರೆಸಲು ನಿರ್ಧರಿಸಿದರು. ಮಹಿಳೆ ಯರಿಗೆ ಉನ್ನತ ವ್ಯಾಸಂಗ ಕೇವಲ ವಿದೇಶದಲ್ಲಿ ಸಾಧ್ಯ ವಿತ್ತು. ಆದರೆ ವಿದೇಶಕ್ಕೆ ಎಳೆಯ ಅವಿವಾಹಿತ ಹುಡುಗಿ ಯರನ್ನು ಕಳುಹಿಸುತ್ತಿರಲಿಲ್ಲ. ಈ ಕಾರಣಕ್ಕೆ ತಮ್ಮ ವಿದ್ಯಾಭ್ಯಾಸ ಮುಂದುವರೆಸಲು ವಿವಾಹವಾಗುವು ದೊಂದೇ ಮಾರ್ಗವಾಗಿ ಕಂಡಿತು. ರಷಿಯಾದ ಸುಧಾರಣಾ ಚಳುವಳಿಯಲ್ಲಿ ಇಳಿದಿದ್ದ ಉದಯೋನ್ಮುಖ ಲೇಖಕ, ಅನುವಾದಕ ಹಾಗೂ ವಿದ್ಯಾರ್ಥಿ ವ್ಲದೀಮಿರ್ ಕೋವಲೇವ್ಸ್ಕಿಯಾ ಸಾಕಷ್ಟು ವಿದೇಶ ಪ್ರವಾಸ ಮಾಡಿ ಬಂದಂಥ ವ್ಯಕ್ತಿ. ಅಕ್ಕ ತಂಗಿಯರು ಆತನಿಗೆ ಮದುವೆ ಯಾಗುವ ತಮ್ಮ ಇಚ್ಛೆಯನ್ನು ವ್ಯಕ್ತ ಪಡಿಸಿದರು. ಆತ ಸೋನ್ಯಾಳನ್ನು ವಿವಾಹವಾಗಲು ಇಚ್ಛಿಸಿದ. ಆದರೆ 23 ವರ್ಷದ ಅಕ್ಕ ಇನ್ನೂ ಅವಿವಾಹಿತ ಳಾಗಿರುವಾಗ, ಹದಿನೆಂಟು ವರ್ಷದ ಸೋನ್ಯಾ ವಿವಾಹ ವಾಗುವುದು ತಂದೆ ತಾಯಿಯರಿಗೆ ಆಘಾತದ ವಿಷಯ ವಾಗಿತ್ತು. ತಕ್ಷಣ ಹೆಣ್ಣು ಮಕ್ಕಳನ್ನು ಪಲೋಬಿನೋ ಮನೆಗೆ ಹಿಂತಿರುಗುವಂತೆ ಆಜ್ಞೆ ಮಾಡಿದರು. ಆದರೆ ಇಲ್ಲಿಯವರೆಗೂ ತೀರ ಅಂಜುಬುರುಕಿಯಾಗಿದ್ದ ಸೋನಾ, ತನ್ನ ಬದುಕು ಭವಿಷ್ಯವನ್ನು ತನ್ನ ಕೈಯಲ್ಲಿ ತೆಗೆದು ಕೊಳ್ಳಲು ನಿರ್ಧರಿಸಿದಳು. ತಂದೆ ತಾಯಿಯರ ಅನು ಮತಿ ಇಲ್ಲದೆ ಮನೆ ಬಿಟ್ಟು ವ್ಲದೀಮಿರ್ ಬಳಿಗೆ ಬಂದಳು. ತಾಯಿ ತಂದೆಯರಿಗೆ ತಾನು ಓಡಿ ಹೋಗಿ ಮದುವೆ ಯಾಗಲಿರುವ ವಿಷಯವನ್ನು ಒಂದು ಹಾಳೆಯಲ್ಲಿ ಬರೆದು ಕಳುಹಿಸಿದಳು. ಗತ್ಯಂತರವಿಲ್ಲದೆ ತಾಯಿ–ತಂದೆ ತಟ್ಟನೆ ಹೋಗಿ ಆಕೆಯನ್ನು ಕರೆತಂದು ವ್ಲದೀಮಿರ್ ಜೊತೆ ಯಲ್ಲಿ ಮದುವೆ ಮಾಡಿದರು. ಹೆಚ್ಚಿನ ಗಣಿತದ ವ್ಯಾಸಂಗಕ್ಕೆ ಸೋನ್ಯಾ ಪತಿಯೊಡನೆ ವಿದೇಶಕ್ಕೆ ಹೊರ ಟಳು.

**ವಿದ್ಯಾಭ್ಯಾಸ :**

1869ರಲ್ಲಿ ಇವರು ಹೀಡಲ್‌ಬರ್ಗ್‌ಗೆ ಬಂದಿಳಿ ದರು. ಇಲ್ಲಿಯ ವಿಶ್ವವಿದ್ಯಾಲಯದಲ್ಲಿ ಪ್ರವಚನಗಳನ್ನು

ಕೇಳಲು ವಿಶೇಷ ಅನುಮತಿ ಪಡೆದು, ಇಲ್ಲಿಯ ವಿಶ್ವ ವಿದ್ಯಾಲಯದಲ್ಲಿ ಅಧ್ಯಯನ ಮಾಡಿದಳು. ವ್ಲದೀಮಿರ್ ಎರಡು ತಿಂಗಳ ನಂತರ ತನ್ನ ವಿದ್ಯಾಭ್ಯಾಸಕ್ಕೆಂದು ಬೇರೆಡೆ ಹೋದ. ಅವರ ವಿವಾಹ ಮೂಲತಃ ಅನುಕೂಲಕ್ಕಷ್ಟೇ ಮಾಡಿಕೊಂಡ ಕಾರಣ, ಸ್ನೇಹಿತರ ನಡುವಿನ ಈ ಅಗಲಿಕೆ ನೋವಿನದೇನೂ ಆಗಿರಲಿಲ್ಲ. ವಿವಾಹದ ಮೂಲ ಉದ್ದೇಶವಾದ ವಿದ್ಯಾಭ್ಯಾಸದ ಅವಕಾಶವನ್ನು ಸಾದಿಸಿದ್ದಾಗಿತ್ತು. ಸೋನ್ಯಾ ಪ್ರೊಫೆಸರುಗಳ ಪ್ರಿಯ ಶಿಷ್ಯಳಾದಳು. 1870ರಲ್ಲಿ ಬರ್ಲಿನಗೆ ಬಂದ ಸೋನ್ಯಾ, ಜರ್ಮನಿಯ ಮಹಾನ್ ಗಣಿತಜ್ಞ ವಾಯೆರ್‌ಸ್ಟ್ರಾಸ್ ನೊಡನೆ ವಿದ್ಯಾಭ್ಯಾಸ ಮಾಡಬಯಸಿದಳು. ಆದರೆ ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಹೈಡಲ್‌ಬರ್ಗ್‌ಗಿಂತಲೂ ಹೆಚ್ಚು ನಿರ್ಬಂಧನಗಳಿದ್ದವು. ಇಲ್ಲಿಯ ತರಗತಿಗಳಲ್ಲಿ ಮಹಿಳೆಗೆ ಪ್ರವೇಶವಿರಲಿಲ್ಲ, ಪ್ರವಚನ ಕೇಳುವ ಅವಕಾಶ ವಿರಲಿಲ್ಲ. ತನ್ನ ಹೈಡಲ್‌ಬರ್ಗ್ ಪ್ರಾಧ್ಯಾಪಕರ ಶಿಫಾರಸ್ಸು ಹಿಡಿದು ಸೋನ್ಯಾ ವಾಯೆರ್‌ಸ್ಟ್ರಾಸ್ ಅವರನ್ನು ಸಂಪರ್ಕಿಸಿದಳು. ಓರ್ವ ಮಹಿಳೆಯೇನು ಗಣಿತವನ್ನು ಗೆಲ್ಲುತ್ತಾಳೆ ಎಂಬ ಅಪನಂಬಿಕೆಯಲ್ಲಿ ಆಕೆಗೆ ಒಂದಷ್ಟು ಕ್ಲಿಷ್ಟ ಸಮಸ್ಯೆಗಳನ್ನು ಕೊಟ್ಟು ಅವುಗಳಿಗೆ ಉತ್ತರ ಹುಡುಕಿ ತರಲು ಕಳುಹಿಸಿದ. ಖಂಡಿತಾ ಆ ಸಮಸ್ಯೆಗಳೊಡನೆ ಆಕೆ ಎಷ್ಟೇ ಹೆಣಗಿದರು, ಉತ್ತರ ಸಿಗಲಾರದು ಎಂದು ನಂಬಿದ್ದ ಆತನಿಗೆ ಮರುವಾರವೇ ಸೋನ್ಯಾ ಎಲ್ಲಾ ಸಮಸ್ಯೆಗಳಿಗೂ ಸರಿಯಾದ ಉತ್ತರಗಳನ್ನು ಕಂಡು ಹಿಡಿದು ಬಂದದ್ದು ಅಚ್ಚರಿ ತರಿಸಿತು. ಆತ ಆಕೆಯ ಪ್ರತಿಭೆಯಿಂದ ಪ್ರಭಾವಿತನಾದರೂ, ವಿಶ್ವವಿದ್ಯಾಲಯದ ಕಾಯಿದೆಯನ್ನು ಬದಲಿಸುವ ಶಕ್ತಿ ಅವನಿಗಿರಲಿಲ. ವಾಯೆರ್‌ಸ್ಟ್ರಾಸ್ ಮನೆಯಲ್ಲಿಯೇ ಆಕೆಗೆ ಖಾಸಗಿಯಾಗಿ ಪಾಠ ಹೇಳಿಕೊಡುತ್ತಾ ತನ್ನ ಪ್ರವಚನದ ನೋಟ್ಸನ್ನು ಅವಳಿಗೆ ಉದಾರವಾಗಿ ನೀಡಿದನು. ಮುಂದಿನ ನಾಲ್ಕು ವರ್ಷಗಳ ಕಾಲ ಸೋನ್ಯಾ ಈತನೊಡನೆ ಪೂರ್ಣ ಗಮನ ವಿಟ್ಟು ಓದಿದಳು. ಆಕೆಯ ಅಧ್ಯಯನದ ತೀವ್ರತೆ ಆಕೆಯನ್ನು ಬಹಳಷ್ಟು ನರಗಳ ತುಡಿತಕ್ಕೆ, ದೌರ್ಬಲ್ಯಕ್ಕೆ ಗುರಿಮಾಡಿತ್ತು. ವ್ಲದೀಮಿರ್ ತನ್ನ ಡಾಕ್ಟರೇಟ್ ಡಿಗ್ರಿ ಪಡೆದು ಈಗ ಬರ್ಲಿನ್‌ಗೆ ಬಂದಿದ್ದ. ಆದರೆ ಸೋನ್ಯಾಗೆ ತಮ್ಮ ವಿವಾಹ ಕೇವಲ ಅನುಕೂಲಸಿಂಧುವಾಗಿ ನಡೆದಿತ್ತು ಎಂಬ ವಿಷಯ ಅತಿಯಾಗಿ ಮುಜುಗರ ತರಿಸಿತ್ತು. ಯಾರಿಗೂ 'ಈತ ನನ್ನ ಪತಿ' ಎಂದು ಆಕೆ ಪರಿಚಯಿಸಿರಲಿಲ್ಲ.

ಮುಂದಿನ ವರ್ಷಗಳಲ್ಲಿ ಸೋನ್ಯಾ ಮೂರು ಅತ್ಯುತ್ತಮ ಸಂಶೋಧನಾ ಪ್ರಬಂಧಗಳನ್ನು ತಯಾರಿಸಿದಳು. 'ಆಂಶಿಕ ಅವಕಲನ ಸಮೀಕರಣ'ಗಳನ್ನು (partial differential equation) ಕುರಿತ ಆಕೆಯ ಮೊದಲ ಪ್ರಬಂಧ ಗಣಿತಕ್ಕೆ ವಿಶಿಷ್ಟವಾದ ಕೊಡುಗೆಯಾಗಿತ್ತು. 'ಅಬೆಲೀಯ ಅನುಕಲನ'ಗಳನ್ನು (Abelian integrals) ಕುರಿತು ಎರಡನೇ ಪ್ರಬಂಧ ಹಾಗೂ ಶನಿಯ ಉಂಗುರಗಳನ್ನು ಕುರಿತ ಪ್ರಬಂಧ ಮೂರನೆಯದು. ಒಟ್ಟಿಗೆ ಈ ಮೂರು ಪ್ರಬಂಧಗಳು ಆಕೆಗೆ ಗಾಟಿನ್ಗೆನ್ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪದವಿ ಪಡೆಯುವ ಅರ್ಹತೆಯನ್ನು ಒದಗಿಸಿಕೊಟ್ಟವು. ಆಕೆಯ ಕೊಡುಗೆ ಎಷ್ಟು ಮಹತ್ತರವಾಗಿತ್ತೆಂದರೆ, ಮೌಖಿಕ ಪರೀಕ್ಷೆ ಇಲ್ಲದೆಯೇ ಆಕೆಗೆ 1874ರಲ್ಲಿ ಡಾಕ್ಟರೇಟ್ ಪದವಿ ನೀಡಲಾಯಿತು. ಸೋನ್ಯಾ ಮತ್ತು ಪತಿ ವ್ಲದೀಮಿರ್ ಇಬ್ಬರೂ ಈಗ ರಷಿಯಾಗೆ ಹಿಂತಿರುಗಿದರು. ಆದರೆ ಕೆಲವೇ ಸಮಯದಲ್ಲಿ ತಂದೆ ತೀರಿಕೊಂಡಾಗ ಅತ್ಯಂತ ದುಃಖಿಯಾದ ಸೋನ್ಯಾಗೆ ಪತಿಯ ಸಾನ್ನಿಧ್ಯದಲ್ಲಿ ನೆಮ್ಮದಿ ದೊರೆತು, ಕಡೆಗೂ ಅವರಿಬ್ಬರ ದಾಂಪತ್ಯ ಜೀವನ ಆರಂಭವಾಯಿತು. ತಂದೆಯಿಂದ ಬಂದ ಒಂದಿಷ್ಟು ಆಸ್ತಿ ಹಿಡಿದು ಪತಿ ಪತ್ನಿಯರಿಬ್ಬರೂ ಸೇಂಟ್ ಪೀಟರ್ಸ್ ಬರ್ಗ್ ತಲುಪಿದರು. ಇಲ್ಲಿ 1878ರಲ್ಲಿ ಅವರ ಒಬ್ಬಳೇ ಮಗಳು ಹುಟ್ಟಿದಳು.

ಇದೇ ಸಮಯ ವ್ಲದೀಮಿರ್‌ಗೆ ತನ್ನ ಕೆಲಸದಲ್ಲಿ ಸರಿಯಾದ ಹೆಸರು ಗೌರವ ದೊರೆಯಲಿಲ್ಲ. ಸೋನ್ಯಾಗೆ ಕೂಡಾ ಯಾವ ಉದ್ಯೋಗವೂ ದೊರಕಲಿಲ್ಲ. ಅವರ ಆರ್ಥಿಕ ಸ್ಥಿತಿ ಸುಧಾರಿಸುವಂತೆ ಕಾಣಲಿಲ್ಲ. ರಷಿಯಾದಲ್ಲಿ ಮಹಿಳೆಯರು ಗಣಿತವನ್ನು ಕೇವಲ ಹೆಣ್ಣು ಮಕ್ಕಳ ಜೂನಿಯರ್ ಶಾಲೆಗಳಲ್ಲಿ ಕಲಿಸಬಹುದಿತ್ತು. 1881ರಲ್ಲಿ ಎರಡನೇ ಅಲೆಕ್ಸಾಂಡರನ ಹತ್ಯೆಯಾದಾಗ ಪರಿಸ್ಥಿತಿ ಮತ್ತೂ ಹದಗೆಟ್ಟಿತು. ನಿಹಿಲಿಸ್ಟ್ ಪಂಥದತ್ತ ಸಹಾನುಭೂತಿ ಇದ್ದವರಿಗಂತೂ ಪರಿಸ್ಥಿತಿ ತುಂಬಾ ಅಪಾಯಕಾರಿಯಾಗಿತ್ತು. ನಿಹಿಲಿಸಂ ಒಂದು ರಾಜಕೀಯ–ಸಾಮಾಜಿಕ ತತ್ತ್ವ ಮತ್ತು ಸಿದ್ಧಾಂತ. ನಿಹಿಲಿಸ್ಟ್ ಪಂಥದವರದು ಶಾಂತಿಯುತ ಚಳುವಳಿಯಾದರೂ, ಸಾಮಾಜಿಕ

ಕ್ರಾಂತಿಯ ಆಗತ್ಯದಲ್ಲಿ ಇವರು ನಂಬಿಕೆ ಇಟ್ಟವರು. ಇವರಿಗೆ ರಷಿಯಾದ ಜನತೆಯಲ್ಲಿ, ಶಿಕ್ಷಣದ ಶಕ್ತಿಯಲ್ಲಿ ನಂಬಿಕೆ ಇತ್ತು. ಎಲ್ಲಕ್ಕಿಂತ ಮುಖ್ಯವಾಗಿ ಇವರು ಮಹಿಳೆ ಪುರುಷನಿಗೆ ಎಲ್ಲಾ ರೀತಿಯಲ್ಲೂ ಸಮಾನಳು ಎಂದು ನಂಬಿದ್ದರು. ಈ ವಿಚಾರಗಳನ್ನು ಬಾಲ್ಯದಲ್ಲೇ ಹೀರಿ ಕೊಂಡ ಸೋನ್ಯಾ ತನ್ನ ಸಾವಿನತನಕ ತನ್ನನ್ನು 'ನಿಹಿಲಿಸ್ಟ್' ಎಂದು ಗುರುತಿಸಿಕೊಂಡವಳು. ಈ ಎಲ್ಲ ಕಾರಣಗಳಿಂದ ಸೋನ್ಯಾ ಮಗುವನ್ನು ಕರೆದುಕೊಂಡು ಬರ್ಲಿನ್‌ಗೆ ಬಂದಳು. ಇಲ್ಲಿ ಆಕೆ ಮತೆ ಗಣಿತದಲ್ಲಿ ಪೂರ್ಣ ಮುಳುಗಿದಳು. ಆದರೆ ಸೋನ್ಯಾಗೆ ಆಘಾತದ ಸುದ್ದಿ ಬಂದಿತು. ಅನೇಕ ಕೋರ್ಟು ವಿಚಾರಣೆಗಳಲ್ಲಿ ಎಳೆಯಲ್ಪಟ್ಟ ಆಕೆಯ ಪತಿ ವ್ಲದೀಮಿರ್ ಆತ್ಮಹತ್ಯೆ ಮಾಡಿಕೊಂಡಿದ್ದ. ಸೋನ್ಯಾ ನೋವಿನ ಆಘಾತದಲ್ಲಿ ಕುಸಿದವಳು, ಐದು ದಿನಗಳ ನಂತರ ಕೊಂಚ ಸುಧಾರಿಸಿ ಕೊಂಡು ಎಚ್ಚೆತ್ತಳು, ಈಗ ಸಂಪೂರ್ಣ ಗಣಿತದಲ್ಲಿ ಮುಳುಗಿದಳು. 1880ರಲ್ಲಿ ಈಕೆ 'ವೆರಾ ಬರಾನತ್ಸೋವಾ' ಎಂಬ ಕಾದಂಬರಿಯನ್ನು, 'ಬಾಲ್ಯದ ನೆನಪುಗಳು' ಎಂಬ ಆತ್ಮಕತೆಯನ್ನೂ ಬರೆದಳು.

**ವಿದ್ವತ್ ಲೋಕದ ಮನ್ನಣೆ :**

ಕಡೆಗೂ ವಿದ್ವತ್ ಜಗತ್ತಿನಲ್ಲಿ ಸೋನ್ಯಾಳಿಗೆ ಮನ್ನಣೆ ದೊರೆಯಿತು. ಸ್ವೀಡನ್ನಿನಲ್ಲಿ ಸ್ಟಾಕ್‌ಹೋಮ್ ವಿಶ್ವವಿದ್ಯಾಲಯ ಆಗಷ್ಟೇ ಸ್ಥಾಪಿಸಲ್ಪಟ್ಟಿದ್ದು, ಮಹಾನ್ ಮಹಿಳಾ ಗಣಿತಜ್ಞಳನ್ನು ತಮ್ಮಲ್ಲಿಗೆ ಆಕರ್ಷಿಸಲು ಇಚ್ಛಿಸಿ ಆಕೆಗೆ ಆಹ್ವಾನವಿತ್ತರು. 1883ರಲ್ಲಿ ಸೋನ್ಯಾ ಸ್ಟಾಕಹೋಮ್‌ಗೆ ಬಂದು ಇಳಿದದ್ದು ಪತ್ರಿಕೆಗಳಲ್ಲಿ ಭಾರೀ ಸುದ್ದಿಯಾಗಿತ್ತು. 'ಇಂದು ವಿಜ್ಞಾನದ ರಾಜಕುಮಾರಿ ಈಕೆ ಸ್ವೀಡನ್ನಿನ ಮೊಟ್ಟ ಮೊದಲ ಮಹಿಳಾ ಪ್ರಾಧ್ಯಾಪಕಿ' ಎಂದು ಸಾರಿದವು. ಇಲ್ಲಿ ಈಕೆ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನ ಪ್ರಾಧ್ಯಾಪಕಳಾದಳು. ಇಷ್ಟೆಲ್ಲ ಪ್ರೀತಿ ಪ್ರೋತ್ಸಾಹದ ನಡುವೆಯೂ ವಿರೋಧವೇನೂ ಪೂರ್ಣ ನಶಿಸಿರಲಿಲ್ಲ. ಸ್ವೀಡನಿನ ಲೇಖಕ ಆಗಸ್ಟ್ ಸ್ಟ್ರಿಂಡ್‌ಬರ್ಗ್ ಮಹಿಳಾ ಹಕ್ಕುಗಳ ಕಟು ವಿರೋಧಿಯಾಗಿದ್ದ. 'ಮಹಿಳೆ ಗಣಿತಜ್ಞಳಾಗುವುದು ಎಂಥಾ ವಿಪರೀತದ್ದು, ವಿಕೃತವಾದದ್ದು' ಎಂದೆಲ್ಲಾ ಟೀಕಿಸಿ ಬರೆದಿದ್ದ. ಸೋನ್ಯಾಗೆ ದುಡಿದು ಗಳಿಸಬೇಕಾದ ಮಹಿಳೆಯಾಗಿ, ಗಣಿತಜ್ಞಳಾಗಿ, ಮತ್ತೊಂದೆಡೆ ತಾಯ್ತನದ ಕರ್ತವ್ಯಗಳನ್ನು ಏಕಾಂಗಿಯಾಗಿ ನಿಭಾಯಿಸಬೇಕಾದ ಪರಿಸ್ಥಿತಿಯಲ್ಲಿ ಸಾಕಷ್ಟು ಮಾನಸಿಕ ಒತ್ತಡಗಳು ಎದುರಾದವು. ಸ್ವೀಡನ್ನಿನಲ್ಲಿ ಸೋನ್ಯಾ ಕೆಲ ಸಮಯ ತೀವ್ರ ತರದ ಗಣಿತದ ಸಂಶೋಧನೆಯಲ್ಲಿ ತೊಡಗಿದರೆ, ಮತ್ತೆ ಕೆಲವು ಸಮಯ ಸೃಜನಾತ್ಮಕ ಸಾಹಿತ್ಯ ರಚನೆಯಲ್ಲಿ ತೊಡಗುತ್ತಿದ್ದಳು. ಆಕೆಯ ಬಹಳಷ್ಟು ಸಾಹಿತ್ಯಿಕ ಕೆಲಸ ಸ್ನೇಹಿತೆ ಆನಾ ಕಾರ್ಲೋಟ ಲೆಫ್ಲರ್‌ನೊಡಗೂಡಿ ಮಾಡಿದ್ದಾಗಿತ್ತು.

1888ರಲ್ಲಿ ಸೋನ್ಯಾಳ 'ಆನ್‌ದಿ ರೊಟೇಶನ್ ಆಫ್ ಎ ಸಾಲಿಡ್ ಬಾಡಿ ಅಬೌಟ್ ಎ ಫಿಕ್ಸೆಡ್ ಪಾಯಿಂಟ್' ಪ್ರಬಂಧಕ್ಕೆ ಫ್ರೆಂಚ್ ವಿಜ್ಞಾನ ಅಕಾಡೆಮಿಯ ಪ್ರತಿಷ್ಠಿತ ಪ್ರಿ ಬೋರ್ದಾನ್ ಪ್ರಶಸ್ತಿ ದೊರೆತದ್ದು ಆಕೆಯ ಉದ್ಯೋಗದ ಮಹತ್ತರ ಸಾಧನೆಯಾಗಿತ್ತು. ಆಕೆಯ ಪ್ರಬಂಧ ಬಹಳ ವಿಶೇಷವಾದುದೆಂದು ತೀರ್ಪಿತ್ತು ಪ್ರಶಸ್ತಿಯ ಹಣದ ಮೊತ್ತವನ್ನು 3000 ಫ್ರಾಂಕ್‌ಗಳಿಂದ 5000ಕ್ಕೆ ಏರಿಸಿದ್ದರು! ಆಕೆಯ ಪ್ರಾಧ್ಯಾಪಕ ವಾಯೆರ್‌ಸ್ಟ್ರಾಸ್ ಆಕೆಯ ಯಶಸ್ಸಿನಿಂದ ತುಂಬಾ ಖುಷಿ ಪಟ್ಟ. ಇದೇ ಸಮಯದಲ್ಲಿ ರಷಿಯಾದ ಕಮ್‌ಪೇಟ್ರಿಯಟ್ ಮ್ಯಾಕ್ಸಿಮ್‌ನೊಡನೆ ಸೋಫಿಯಾಳ ಪ್ರೇಮ ವ್ಯವಹಾರ ಆರಂಭವಾಯಿತು. ಆದರೆ ಅವರ ಸಂಬಂಧ ಅಷ್ಟು ಸುಗಮವಾಗಿ ಹರಿದುದಾಗಿರಲಿಲ್ಲ. ಮ್ಯಾಕ್ಸಿಮ್ ಆಕೆ ತನ್ನ ಕೆಲಸ, ಸಂಶೋಧನೆ ಬಿಟ್ಟು ಕೇವಲ ಪತ್ನಿಯಾಗಿ ಇರಬೇಕೆಂದು ಒತ್ತಾಯಿಸಿದ. ಸೋನ್ಯಾಗೆ ಅದು ಅಸಾಧ್ಯವಿತ್ತು. 1889ರಲ್ಲಿ ಸೋನ್ಯಾ ಸ್ಟಾಕ್‌ಹೋಮ್‌ಗೆ ಬಂದಾಗ ಜೀವನದಿಂದ ಪೂರ್ಣ ರೋಸಿ, ವಿಪರೀತ ಖಿನ್ನತೆಯಲ್ಲಿ ಮುಳುಗಿದ್ದಳು. ಬದುಕುವ ಉತ್ಸಾಹವನ್ನೇ ಕಳಕೊಂಡಿದ್ದಳು. ಸೋತ ನಿಶಕ್ತ ದೇಹ ನ್ಯುಮೋನಿಯಾಗೆ ತುತ್ತಾಗಿ ಕೇವಲ 41 ವರ್ಷದ ಸೋನ್ಯಾಳ ಸಾವಿಗೆ ಕಾರಣವಾಯಿತು.

ಆಕೆಯ ಸಾವಿನ ಸಮಯಕ್ಕಾಗಲೇ ಸೋನಾ ಗಣಿತದ ಸಂಶೋಧನೆಯಲ್ಲಿ ಶ್ರೇಷ್ಠ ಅನ್ವೇಷಣೆಗಳನ್ನು ಮಾಡಿದ್ದಳು, ಪ್ರಸಿದ್ಧಿಯ ತುತ್ತತುದಿಯಲ್ಲಿದ್ದಳು. ಸೋನ್ಯಾಳ ಬದುಕು ಆಕೆ ತನ್ನ ಸಮಯದ ಹಿಡಿತಗಳಿಂದ ಸಿಡಿದು ಗೆಲ್ಲುವ ಯತ್ನವಾದರೂ, ತನ್ನ ಸಮಯದ

ಸೋನ್ಯಾ ಅಸಮಾನ್ಯ ಪ್ರತಿಭೆಯ ಮಹಿಳೆ. ಈಕೆ ಗಣಿತದ ಸಮೀಕರಣಗಳನ್ನು ವಿವರಿಸುವಷ್ಟೇ, ಸಲೀಸಾಗಿ ಶನಿ ಗ್ರಹದ ಉಂಗುರಗಳ ಬಗ್ಗೆ ಸಂಶೋಧನೆಗೆ ತೊಡಗಿದ್ದಳು. ಫ್ರೆಂಚ್ ಭಾಷೆಯಲ್ಲಿ ಕವಿತೆ ಬರೆದಷ್ಟೇ ಸುಲಭವಾಗಿ ರಷಿಯನ್ ಭಾಷೆಯಲ್ಲಿ ಕಾದಂಬರಿ ಬರೆದಳು, ಸ್ವೀಡಿಷ್ ಭಾಷೆಯಲ್ಲಿ ನಾಟಕ ಬರೆದಳು. ತನ್ನ ಪುಟ್ಟ ಮಗಳಿಗೆ ಲೇಸಿನ ಲಂಗ ಹೊಲೆದಳು. ಆಕೆಯನ್ನೊಮ್ಮೆ ಆಕೆಯ ಗಣಿತ ಮತ್ತು ಸಾಹಿತ್ಯದ ವಿಚಿತ್ರ ಸಂಯೋಗದ ಬಗ್ಗೆ ಪ್ರಶ್ನಿಸಿದಾಗ ಸೋನ್ಯಾ, 'ಕವಿಯಾಗದೆ ಗಣಿತಜ್ಞಳಾಗಲು ಸಾಧ್ಯವಿಲ್ಲ. ಕವಿ ಕೇವಲ ಅಸ್ತಿತ್ವದಲ್ಲಿ ಇಲ್ಲದ ಕಲ್ಪನೆಯ ಕಸರತ್ತು ಮಾಡಬೇಕೆಂದು ತಿಳಿಯುವುದು ತಪ್ಪು. 'ಕಲ್ಪನೆ' ಮತ್ತು 'ಅನ್ವೇಷಣೆ' ಎರಡೂ ಒಂದೇ. ಓರ್ವ ಗಣಿತಜ್ಞನೂ ಅದೇ ಕೆಲಸ ಮಾಡುತ್ತಾನೆ' ಎಂದು ಉತ್ತರಿಸಿದ್ದಳು.

ಹಿಡಿತಗಳಿಗೆ ಬಲಿಯಾದ ದುರಂತ ಕೂಡಾ ಆಗಿತ್ತು. 'ಆಂಶಿಕ ಅವಕಲನ ಸಮೀಕರಣ'ಗಳ ಕುರಿತ ಈಕೆಯ ಸಂಶೋಧನೆ ಈಕೆಯನ್ನು 19ನೇ ಶತಮಾನದ ರಷಿಯಾದ ಮಹಾನ್ ಗಣಿತಜ್ಞಳನ್ನಾಗಿ ಮಾಡಿತು. ಸೋನ್ಯಾ ಕೇವಲ ಸಾಹಿತಿ, ಗಣಿತಜ್ಞೆಯಷ್ಟೆ ಅಲ್ಲ, ಸ್ತ್ರೀಯರ ಹಕ್ಕುಗಳಿಗೆ ಹೋರಾಡಿದಾಕೆ. ರಷಿಯಾ, ಪೋಲೆಂಡ್ ಮತ್ತು ಪಶ್ಚಿಮ ಯೂರೋಪುಗಳ ಕ್ರಾಂತಿಕಾರಿ ರಾಜಕೀಯ ಚಳುವಳಿಗಳನ್ನು ಬೆಂಬಲಿಸಿದವಳು. ರಾಜಕೀಯ, ವಿಜ್ಞಾನ ಮತ್ತು ಸಾಹಿತ್ಯದ ಸುಪ್ರಸಿದ್ಧರು ಈಕೆಯ ಪರಿಚಿತರಾಗಿದ್ದರು. ಅವರಲ್ಲಿ ಚಾರ್ಲ್ಸ್ ಡಾರ್ವಿನ್, ಟಿ. ಎಚ್. ಹಕ್ಸ್ಲೇ, ಜಾರ್ಜ್ ಎಲಿಯಟ್ ಮುಂತಾದವರು ಸೇರಿದ್ದರು. ಸಾಮಾಜಿಕ ವಿಷಯಗಳಲ್ಲಿ ತನ್ನ ಪುರೋಗಾಮಿ ಚಿಂತನೆಗಳನ್ನು ಪ್ರತಿಪಾದಿಸಲು ಸೋನ್ಯಾ ತನ್ನ ಬರಹದ ಸಾಮರ್ಥ್ಯವನ್ನು ಬಳಸಿಕೊಂಡಳು. 19ನೇ ಶತಮಾನದ ವೈಜ್ಞಾನಿಕ ಜಗತ್ತಿನಲ್ಲಿ ಸೋನ್ಯಾಗೆ ವಿಶೇಷ ಸ್ಥಾನವಿದ್ದು, ಆಕೆ ತನ್ನ ಜೀವಿತ ಕಾಲದಲ್ಲಿಯೇ ಪ್ರಸಿದ್ಧಳಾದಳು. ಬ್ರಿಟನ್ನಿನ ಬೀಜಗಣಿತಶಾಸ್ತ್ರಜ್ಞ ಜೆ. ಜೆ. ಸಿಲ್ವೆಸ್ಟರ್ ಸೋನ್ಯಾಳನ್ನು ಕುರಿತು ಒಂದು ಸಾನೆಟ್ ಬರೆದಿದ್ದ. 41ನೇ ವಯಸ್ಸಿಗೇ ಸಾವನ್ನಪ್ಪಿದ ಸೋನ್ಯಾ ತನ್ನ ಗಣಿತದ ಪ್ರತಿಭೆಗೆ ಸ್ತ್ರೀಯರ ಹಕ್ಕುಗಳ ಹೋರಾಟಕ್ಕೆ, ರಾಜಕೀಯ ವಿಷಯಗಳಲ್ಲಿ ಆಕೆಯ ಕಳಕಳಿ ಸಹಾನುಭೂತಿಗೆ ನೆನಪಾಗಿದ್ದಾಳೆ. ●

---

## ಒಣಕಲು ಬಾರ್ಬಿಯ ಸಂದೇಶ

ನಮ್ಮ ಬಾಲ್ಯದಲ್ಲಿ ದಪ್ಪ ದಪ್ಪ ಕೆನ್ನೆಯ, ಡುಮ್ಮ ಡುಮ್ಮಕ್ಕಿದ್ದ ಕರ್ಪೂರದ ಗೊಂಬೆಗಳು ಮಕ್ಕಳಿಗೆ ಪ್ರಿಯವಾಗಿದ್ದವು. ಇಂದು ಕಡ್ಡಿಯಂಥಾ ಕೈಕಾಲಿನ ಒಣಕಲು ಬಾರ್ಬಿ ಬೊಂಬೆಗಳು ಮಾರುಕಟ್ಟೆಯ ತುಂಬಾ ತುಂಬಿ, ಕಣ್ಣು ಕೋರೈಸುವ ಉಡುಪು, ಒಡವೆಗಳಲ್ಲಿ, ಬಗೆಬಗೆಯ ಜಾಹಿರಾತು ತಂತ್ರದಲ್ಲಿ ಮನೆ ಮನೆಯ ಮಕ್ಕಳ 'ಕನಸಿನ ಕನ್ಯೆ'ಯಾಗಿವೆ. 1959ರಲ್ಲಿ ಅಮೆರಿಕೆಯ ಮಾರುಕಟ್ಟೆಗೆ ಬಂದ ಬಾರ್ಬಿ, ಇಂದಿನವರೆಗೆ 800 ಮಿಲಿಯ ಸಂಖ್ಯೆಯಲ್ಲಿ ಮಾರಾಟವಾಗಿದೆ. ಈ ಕಡ್ಡಿದೇಹದ ತುಂಬಿದೆದೆಯ ಬಾರ್ಬಿ ಅಸಾಧ್ಯವಾದ ಸೌಂದರ್ಯದ ಪರಿಕಲ್ಪನೆಯನ್ನು ನೀಡುತ್ತಾಳೆ ಎನ್ನುವುದು ನಿರ್ವಿವಾದ. ಇತ್ತೀಚೆಗೆ ಯೇಲನ ಮನಶಾಸ್ತ್ರಜ್ಞ ಕೆಲ್ಲಿ ಬ್ರೌನೆಲ್ ಬಾರ್ಬಿಯನ್ನು ಅಳತೆ ಮಾಡಿ 'ಓರ್ವ ಆರೋಗ್ಯವಂತ ಆಕರ್ಷಕ ಹುಡುಗಿ, ಬಾರ್ಬಿಯ ದೇಹದ ಅಳತೆಯನ್ನು ಪಡೆಯಬೇಕೆಂದರೆ, ಸೊಂಟದ ಸುತ್ತ ಐದು ಇಂಚು ಕಳೆದುಕೊಂಡು, ಎದೆಯನ್ನು ನಾಲ್ಕು ಇಂಚಾದರೂ ಉಬ್ಬಿಸಿಕೊಂಡು, ಒಂದು ಅಡಿಯಷ್ಟು ಎತ್ತರವನ್ನಾದರೂ ಗಿಟ್ಟಿಸಿಕೊಂಡರೆ ಮಾತ್ರ ಸಾಧ್ಯ. ಮೊದಲೇ ಸೌಂದರ್ಯದ ವಿಪರೀತದ ಕಲ್ಪನೆಯ ರಾಷ್ಟ್ರದಲ್ಲಿ ಬಾರ್ಬಿ ಮಕ್ಕಳಿಗೆ ಅಸಾಧ್ಯದ ದೇಹದಳತೆಯ ಅನಾರೋಗ್ಯಕರ ಸಂದೇಶ ನೀಡುತ್ತಾಳೆ' ಎಂದಿದ್ದಾರೆ. ಸಿಂಹಕಟಿ, ಕುಂಭಕುಚದ ಕಲ್ಪನೆಯ ನಮ್ಮ ದೇಶದಲ್ಲಿ ಬಾರ್ಬಿ ಏನು ಪ್ರಭಾವ ಬೀರಿದ್ದಾಳೆ ನೋಡಬೇಕು.

# ಅರಣ್ಯೀಕರಣ - ಕರ್ನಾಟಕದ ಸಾಧನೆ

ಶ್ರೀಮಂತ, ಜೀವ ವೈವಿಧ್ಯ ಹಾಗೂ ಅಮೂಲ್ಯ ಸಸ್ಯರಾಶಿ ಹೊಂದಿರುವ ಅರಣ್ಯ ಕರ್ನಾಟಕ ರಾಜ್ಯಕ್ಕೆ ನಿಸರ್ಗದತ್ತ ಕೊಡುಗೆ. ಭವ್ಯ ಸಸ್ಯಗಳು ಹಾಗೂ ಜೀವರಾಶಿಗಳ ಸಂಯೋಗದೊಂದಿಗೆ ತುಂಬಿ ತುಳುಕುತ್ತಿರುವ ಅರಣ್ಯಗಳು ಜನರ ಜೀವನಾಡಿಯಂತಿವೆ. ಜನರ ಅಳಿವು, ಉಳಿವು ಸಂಪದ್ಭರಿತ ಅರಣ್ಯದ ಮೇಲೆ ಅವಲಂಬಿಸಿದೆ. ಹೀಗಿದ್ದರೂ ಅತಿಕ್ರಮಣ ಪ್ರವೇಶದಿಂದಾಗಿ ನಶಿಸುತ್ತಿರುವ ಅರಣ್ಯ ಪ್ರದೇಶಕ್ಕೆ ನವತಾರುಣ್ಯವನ್ನು ನೀಡುವುದು ಮಾತ್ರವಲ್ಲದೆ, ನಮ್ಮೆಲ್ಲರ ಉಳಿವಿಗಾಗಿ ಹೊಸ ಪ್ರದೇಶದಲ್ಲಿ ಅರಣ್ಯವನ್ನು ಬೆಳೆಸಿ ಹಾಳಾಗುತ್ತಿರುವ ಅರಣ್ಯ ಸಂಪತ್ತನ್ನು ರಕ್ಷಿಸಬೇಕಾಗಿದೆ.

### ಸರ್ಕಾರದ ದಿಟ್ಟ ಹೆಜ್ಜೆ

1995–96ರ ಸಾಲಿನಲ್ಲಿ 64,350 ಹೆಕ್ಟೇರ್ ಭೂಮಿಯ ಅರಣ್ಯೀಕರಣ ಈ ದಿಶೆಯಲ್ಲಿ ಕ್ಷೀಣಿಸುತ್ತಿರುವ ಅರಣ್ಯ ಪ್ರದೇಶವನ್ನು ಊರ್ಜಿತಗೊಳಿಸಲು ಮತ್ತು ಆಸಕ್ತಿಯಿಂದ ಜನರು ಭಾಗವಹಿಸಲು "ಜಂಟಿ ಅರಣ್ಯ ಯೋಜನೆ ಮತ್ತು ಸಂರಕ್ಷಣೆ" ಎಂಬ ನೂತನ ಯೋಜನೆ ಪ್ರಾರಂಭ. ಜೈವಿಕ ವೈವಿಧ್ಯತೆಯನ್ನು ಕಾಪಾಡಲು ನೆರವಾಗಲು 200 ಗ್ರಾಮ ಸಮಿತಿಗಳ ರಚನೆ.

### ಅತಿಕ್ರಮಣ ಅರಣ್ಯ ಪ್ರದೇಶಗಳ ಸಕ್ರಮ

ಪರಿಶಿಷ್ಟ ಜಾತಿ ಪಂಗಡ ಗಿರಿಜನರು, ಬಡಜನರು 27–4–1978ಕ್ಕೆ ಮೊದಲು ಅತಿಕ್ರಮಣ ಮಾಡಿದ 17,007 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಸಕ್ರಮಗೊಳಿಸಲು ಕೇಂದ್ರ ಸರ್ಕಾರದ ಅನುಮತಿಗಾಗಿ ಪ್ರಸ್ತಾವನೆಯನ್ನು ಸಲ್ಲಿಸುವುದರೊಂದಿಗೆ 21,569 ಕುಟುಂಬಗಳಿಗೆ ವರದಾನ.

ರಾಜ್ಯದಲ್ಲಿ ದೊರೆಯುವ ಬೀಳು ಭೂಮಿಯಲ್ಲಿ ಅರಣ್ಯ ಬೆಳೆಸಲು ಯೋಜನೆ. ಈ ದಿಶೆಯಲ್ಲಿ ಮುಂದಿನ ಮೂರು ವರ್ಷಗಳಲ್ಲಿ ಲಭ್ಯವಿರುವ 22,600 ಎಕರೆ ಬೀಳು ಭೂಮಿಯಲ್ಲಿ ಹುಣಸೆ, ಸಾಗುವನಿ, ಬೊಂಬು, ಕತ್ತಾಳೆ, ಪಲ್ಪ್‌ವುಡ್ ಮರಗಳನ್ನು ಬೆಳೆಸುವ ಯೋಜನೆಯ ಅನುಷ್ಠಾನ.

★ **ಕರ್ನಾಟಕ ವಾರ್ತೆ**



ಪುಸ್ತಕ ಪರಿಚಯ

# ಮಹಿಳಾಪರ ಚಿಂತನೆಗಳಿಗೊಡ್ಡುವ "ಹೊಸ ಹೆಜ್ಜೆ"

ಈಗಾಗಲೇ ಸಣ್ಣಕತೆಗಳ ಪ್ರಕಾರದಲ್ಲಿ ತಮ್ಮ ಹೆಸರನ್ನು ಸ್ಥಾಪಿಸಿರುವ ಶ್ರೀಮತಿ ಗಂಗಾ ಪಾದೇಕಲ್ ರವರ ಮೂರನೇ ಕಥಾಸಂಕಲನ 'ಹೊಸಹೆಜ್ಜೆ' ಮೊದಲೆರಡು ಕಥಾಸಂಕಲನಗಳಲ್ಲಿ ದಕ್ಷಿಣ ಕನ್ನಡದ ಪ್ರಾದೇಶಿಕತೆಗೇ ಹೆಚ್ಚು ಒತ್ತು ಕೊಟ್ಟು ಬರೆಯುತ್ತಿದ್ದ ಗಂಗಾರವರು ತಮ್ಮ ಮೂರನೇ ಸಂಕಲನದಲ್ಲಿ ತಮ್ಮ ಬರಹವನ್ನು ತುಸು ಭಿನ್ನವಾಗಿಸಿದ್ದಾರೆ. ಮಧ್ಯಮ ವರ್ಗದ, ಕೆಳವರ್ಗದ ಮಹಿಳೆಯರ ಬದುಕು ಇತ್ತೀಚಿನ ಅನೇಕ ಲೇಖಕಿಯರಿಗೆ ಸಹಜ ವಸ್ತುವಾಗಿರುವಂತೆ ಗಂಗಾರವರಿಗೂ ವಸ್ತುವಾಗಿದೆ. ಮಹಿಳೆ ಮತ್ತು ಸಮಾಜ, ಅವರ ಮುಖ್ಯ ಕಾಳಜಿಗಳಲ್ಲಿ ಒಂದಾಗಿದೆ. ಸಾಂಪ್ರದಾಯಿಕವಾಗಿ ಬಂದ ತಿಳುವಳಿಕೆಗಳು, ಪುರುಷ ಪ್ರಧಾನವಾಗಿ ಒಪ್ಪಿತವಾಗಿ ರೂಢಿಯಲ್ಲಿರುವ ಕುಟುಂಬದ 'ಇರುಸರಿಕೆ'ಗಳು ಗಂಗಾರವರಲ್ಲಿ ಮುಖ್ಯ ಪ್ರಶ್ನೆಯಾಗುತ್ತದೆ. ಉದಾ ಹೆಣ್ಣಿಗೆ ಮದುವೆಯೇ ಪರಮ ಗುರಿಯೇ ? ಬಂಜೆಯೆಂದರೆ ಇತರರಿಂದ ತಿರಸ್ಕೃತಳಾಗುತ್ತಾ ಇರುವುದೇ ? ಅವಿವಾಹಿತೆಗೆ ಎಲ್ಲರಂತೆ ಬದುಕುವ ಹಕ್ಕಿಲ್ಲವೆ ? ಇಂಥದೇ ಅನೇಕ ಸ್ತ್ರೀ ಸಮಸ್ಯೆಗಳು ಗಂಗಾರವರಲ್ಲಿ ಪ್ರಶ್ನೆಗಳನ್ನು ಹುಟ್ಟಿಸಿ ಕಥೆಯೊಳಗೇ ಪರಿಹಾರ ಹುಡುಕುವ ಯತ್ನ ನಡೆಸುತ್ತಾರೆ.

"ನಮ್ಮ ಕಾಲದ ಹಲವು ಜ್ವಲಂತ ಸಮಸ್ಯೆಗಳು, ಅದರಲ್ಲೂ ಮಹಿಳೆಯರ ಸಮಸ್ಯೆಗಳು, ಪ್ರಶ್ನೆಗಳು ಈ ಸಂಕಲನದ ಕಥೆಗಳಿಗೆ ಭೂಮಿಕೆಯನ್ನೊದಗಿಸಿವೆ. ಅವಿವಾಹಿತೆಯರ, ಬಂಜೆಯರ, ವಿಧವೆಯರ, ಆರ್ಥಿಕ ಪರಾವಲಂಬಿಗಳ ಸಮಸ್ಯೆಗಳ ಹಲವು ಮುಖಗಳು ಇಲ್ಲಿವೆ. ಈ ಸಮಸ್ಯೆಗಳ ಹಿನ್ನೆಲೆಯಲ್ಲಿ ಮಹಿಳೆಯರ ಬದುಕಿನ ಒಳಗುದಿಯನ್ನೂ ಯಾತನೆಯನ್ನೂ ತೆರೆದಿಡುವ ಪ್ರಯತ್ನಗಳನ್ನು ಮಾಡುವುದಷ್ಟೇ ಅಲ್ಲದೆ ಆ ಸಮಸ್ಯೆಗಳು ಪರಿಹಾರಗೊಳ್ಳಬಹುದಾದ ರಚನಾತ್ಮಕ ದಾರಿಗಳನ್ನು ಹುಡುಕುವುದು, ಸೂಚಿಸುವುದು ಕೂಡ ಗಂಗಾ ಅವರಿಗೆ ಅಗತ್ಯವಾಗಿ ಕಂಡಿದೆ" ಎಂದು ಮುನ್ನುಡಿಯಲ್ಲಿ ಡಾ. ವಿಜಯಾ ದಬ್ಬೆಯವರು ಗುರುತಿಸಿದ್ದಾರೆ. ಅವರೆನ್ನುವಂತೆ ಗಂಗಾರವರ ಬರವಣಿಗೆಯ ಮೂಲ ಒತ್ತಡವೂ, ಯಾತನೆಯಿಂದ ಸಂಪ್ರದಾಯದ ಜಡ್ಡುಗಳಿಂದ ಪರಾವಲಂಬನೆಯಿಂದ ಬಿಡುಗಡೆಯಾಗಲೇಬೇಕಾದ 'ಅಗತ್ಯ' ಕೂಡ ಆಗಿದೆ.

'ಹೊಸ ಹೆಜ್ಜೆ'ಯಲ್ಲಿ ಒಟ್ಟು ಹದಿನೈದು ಕಥೆಗಳಿವೆ. ಇವು ಈಗಾಗಲೇ ಅನೇಕ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. 'ಲೇಖಕಿಯ ಮಾತು'ವಿನಲ್ಲಿ ಲೇಖಕಿಯು ತಮ್ಮಲ್ಲಿದ್ದ ನೂರಕ್ಕಿಂತಲೂ ಹೆಚ್ಚಿನ ಕಥೆಗಳನ್ನು ಶ್ರದ್ಧೆಯಿಂದ ಓದಿ ಈ ಕಥೆಗಳನ್ನು ಆರಿಸಿ ಪ್ರಕಟಿಸಿದವರಿಗೆ ಕೃತಜ್ಞತೆ ಸಲ್ಲಿಸುವುದನ್ನು ಕಂಡಾಗ ಬೆರಗುಂಟಾಗುತ್ತದೆ. ತಮ್ಮ ಹಿಂದಿನ ಕಥಾಸಂಕಲನ 7 ವರ್ಷಗಳ ಕೆಳಗೆ ಪ್ರಕಟವಾದದ್ದು ಲೇಖಕಿಯ ಮಾತಿನಲ್ಲೇ ತಿಳಿಯುತ್ತದೆ. ಅಂದರೆ ಮತ್ತೆ 7 ವರ್ಷಗಳಲ್ಲೇ ನೂರಕ್ಕಿಂತಲೂ ಹೆಚ್ಚು ಕತೆ ಬರೆದ ಕತೆಗಾರ್ತಿಯ ಬಗ್ಗೆ ಸೋಜಿಗವಲ್ಲದೇ ಮತ್ತೇನು ಮೂಡಲು ಸಾಧ್ಯ.

'ಹೊಸ ಹೆಜ್ಜೆ'ಯ ಮಹಿಳೆಯರ ಸಮಸ್ಯೆಗಳನ್ನು ಸ್ಥೂಲವಾಗಿ ಮೂರು ವಿಭಾಗಗಳಲ್ಲಿ ಗಮನಿಸಬಹುದು. ಒಂದು ಅವಿವಾಹಿತೆಯ ಒಳಗುದಿಗಳು ಎರಡು ಬಂಜೆ ಹಾಗೂ ವಿಧವೆಯರ ಒತ್ತಡಗಳು ಮೂರು ಅಪರೂಪದ್ದಾದರೂ ಗಮನಿಸುವಂಥದು ವಿವಾಹ ಬಾಹಿರ ಲೈಂಗಿಕ ಸಂಬಂಧಗಳು.

ಉದ್ಯೋಗಸ್ಥ ಅವಿವಾಹಿತೆಯರ ಸಮಸ್ಯೆ ನಮ್ಮ

ಸಮಾಜದಲ್ಲಿ ನಿಜಕ್ಕೂ ಅವಜ್ಞೆಗೆ ಒಳಗಾಗಿರುವ ಸಮಸ್ಯೆ. ಆಕೆ ಮನೆಯ ಹಿರಿಯ ಹೆಣ್ಣುಮಗಳಾದರಂತೂ ಒಡಹುಟ್ಟುಗಳು ಆಕೆಯ ಗಳಿಕೆಯನ್ನೂ ಮನೆಯ ಕಾಳಜಿಗಳನ್ನೂ ಹಕ್ಕಿನಿಂದ ತಮ್ಮದಾಗಿಸಿಕೊಂಡು ರೆಕ್ಕೆ ಪುಕ್ಕ ಬಲಿತಮೇಲೆ ಅಕ್ಕನ ಪರಿವೆಯೇ ಇಲ್ಲದೆ ಹಾರಿಹೋಗಿಬಿಡುವಂಥದ್ದು. ಅಂಥ ಹಿರಿ ಹೆಣ್ಣುಗಳಿಗೆ ಬರುವ ಸಂಬಂಧವೂ ಮಕ್ಕಳಿರುವ ಅಪ್ಪನಂತಹವರೇ. ಇಂಥಹ ಹೆಣ್ಣುಗಳು ವಿವಾಹದ ಹಂಗಿಲ್ಲದೇ ಮಕ್ಕಳನ್ನು ದತ್ತು ತೆಗೆದುಕೊಳ್ಳುವುದಕ್ಕೂ ಸಮಾಜದಲ್ಲಿ ಅನೇಕ ಕುತ್ತುಗಳೇ ! ಮದುವೆಯಿಲ್ಲದ ಹೆಣ್ಣುಗಳು ಸ್ವತಂತ್ರವಾಗಿ ಏಕಾಂಗಿಯಾಗಿ ಬಾಳುವುದಕ್ಕೂ ನಮ್ಮ ಪುರುಷ ವ್ಯವಸ್ಥಿತ ಸಮಾಜದಲ್ಲಿ ನಿರ್ಮಲವಾದ ಪರಿಸರಗಳಿಲ್ಲ. ಇಂಥ ಬವಣೆಗಳನ್ನು 'ಬದುಕಿನ ಬೇರನ್ನರಸಿ' ಕತೆಯ ಕುಸುಮ, 'ಕಣ್ಣಾ ನೀರೆದ್ದು ಹೊಳೆಯಾದೋ' ಕತೆಯ ಗಿರಿಜೆ, 'ಹೊಸ ಹೆಜ್ಜೆ'ಯ ಲಲಿತೆ ಅನುಭವಿಸುತ್ತಾರೆ.

ಬಂಜೆಯರ ಮತ್ತು ವಿಧವೆಯರ ಕೊನೆಗಾಣದ ಸಮಸ್ಯೆಗಳು ಅನೇಕ ಸಾಹಿತಿಗಳಿಗೆ 'ಕಥಾಪ್ರಜ್ಞೆ'ಯಾಗುವಂತೆ ಗಂಗಾರವರಲ್ಲೂ ಆಗಿದೆ. ಅವುಗಳ ನಿರ್ವಹಣೆಯೂ ಯಾವ ಹೊಸ ಆಯಾಮವನ್ನೂ ಕಲ್ಪಿಸದೆ, ಬಂಜೆಯರ ಉಡಿಗೆ ಅನಾಥ ಶಿಶುವೋ, ಯುವತಿ ವಿಧವೆಗೆ ಮತ್ತೊಂದು ಮದುವೆಯೋ ಆಗಿ ಕೊನೆಗೊಂಡಿದೆ.

ನನಗೆ ಕುತೂಹಲವೆನ್ನಿಸುವುದು ಗಂಗಾರವರ ಕೆಲವು ಕತೆಗಳಲ್ಲಿ ಬರುವ ವಿವಾಹ ಬಾಹಿರ ಪ್ರೇಮ. 'ಅರಿವು' ಮತ್ತು 'ಒಂದೇ ಒಂದು ಅವಕಾಶ'ಗಳಲ್ಲಿ ಬರುವ ಪ್ರಸಂಗಗಳು. ಅರಿವು ಕಥೆಯ ನಾಯಕಿ ಸುಜಾತಾ ಪಿ.ಯು.ಸಿ.ಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದರೂ ಬಡತನದ ಕಾರಣಕ್ಕೆ ವಿದ್ಯೆ ನಿಲ್ಲಿಸಿ ಅಪ್ಪ ಹೇಳಿದ ವರಕ್ಕೆ ಕತ್ತು ಬಾಗಿಸಿ ತಾಳಿ ಕಟ್ಟಿಸಿಕೊಂಡು ಗಂಡ ಶ್ರೀಧರನ ಔದಾರ್ಯದಿಂದ ನಗರದಲ್ಲಿ ಮನೆಮಾಡಿ ಎಂ.ಬಿ.ಬಿ.ಎಸ್. ಓದಿದವಳು. ಕೊನೆಯ ವರ್ಷ ತನ್ನ ವಿದ್ಯೆಗೆ, ಅಭಿರುಚಿಗಳಿಗೆ ಹಳ್ಳಿಯ ಗಂಡ ಸರಿಯಲ್ಲ, ತನಗೆ ಪ್ರೀತಿ, ಸಾಂಗತ್ಯ ಇತ್ಯಾದಿಗಳ ಅರ್ಥ ಪರಿಚಯಿಸಿದವನು ತನ್ನ ಪ್ರಿಯಕರ ಡಾ. ಸುಧಾಕರನೇ ಎಂದುಕೊಂಡರೂ ಅವಳು ಗಂಡನ ಮುಂದಿಡುವ ತರ್ಕ ವಿಚಿತ್ರವಾಗಿದೆ. "ನೀವೇಕೆ ನನ್ನನ್ನು ಓದಿಸಿದಿರಿ. ಆ ಕಠಿಣ ಓದು ನಿನಗೆ ಬೇಡ ನನ್ನ ತೋಳಾಸರೆಯಲ್ಲಿ ಬೆಚ್ಚಗಿರು ಎಂದು ಬಯ್ದು ಸುಮ್ಮನಿರಿಸಬೇಕಿತ್ತು" ಎನ್ನುವುದು, "ಓದುವಾಸೆ ನನ್ನ ಬಾಲಿಶ ಆಸೆಯಾಗಿತ್ತು" ಎಂದು ಹಲುಬುವುದು, 'ಕೊನೆಯಲ್ಲಿ ತನ್ನ ತಾಯಿ, ಸೊಸೆ ಯಾರೊಂದಿಗೋಓಡಿಹೋದಳೆಂದರೆ ಸತ್ತೇಹೋದಾಳು' ಎಂದು ನಾಯಕ "ಅಂದು ಬಯ್ಯದ್ದನ್ನು ಇಂದು ಮಾಡುತ್ತೇನೆ. ನನ್ನ ತಾಯಿಯನ್ನು ಬದುಕಿಸುವ ಸಲುವಾಗಿಯಾದರೂ ನೀನು ವಾಪಸ್ ಹಳ್ಳಿಗೆ ಬರಬೇಕು" ಎಂದು ಹೆಂಡತಿಗೆ ಅಪ್ಪಣೆ ಮಾಡಲು ನಿರ್ಣಯಿಸುವುದು, ಇವೆಲ್ಲ ಬಹುಶಃ ಸರಿಯಾದ ತರ್ಕದ ಆಧಾರವಿಲ್ಲದೆ ಬೆಳೆದ ಕಥಾ ಹಂದರ. ಇದಕ್ಕೆ ತದ್ವಿರುದ್ಧವಾದ ಪ್ರಸಂಗ "ಒಂದೇ ಒಂದು ಅವಕಾಶ" ಕಥೆಯಲ್ಲಿದೆ. ಇಲ್ಲಿ ಕಾಲೇಜು ಉಪನ್ಯಾಸಕನಾದ, ಎಳೆಯ ಬಾಲಕನ ಅಪ್ಪನಾದ, ಕಥಾನಾಯಕ ಕೆಲಸದ ನಿಂಗಿಯನ್ನು ಕೂಡುತ್ತಾನೆ. ಇಲ್ಲಿ ಈ ಕೂಡುವಿಕೆಯನ್ನೂ ಕೇವಲ ಆಕಸ್ಮಿಕ ಎನ್ನುವಂತೆ ಚಿತ್ರಿಸಲಾಗಿದೆ. ಗಂಡನನ್ನು ತೊರೆದು ಬಂದ ಹರೆಯದ ನಿಂಗಿ ಸಹ 'ಈ ಆಕಸ್ಮಿಕಕ್ಕೆ ಸಮ ಕಾರಣ' ಎಂದು ನಾಯಕನ ವಾದ. ಉದ್ಯೋಗಸ್ಥೆ, ಸೂಕ್ಷ್ಮಮತಿಯ ನಾಯಕಿ ಗಂಡನ ಹೀನ ನಡತೆಯನ್ನು ಮೌನದ ಮೂಲಕ, ಕಿಡಿ ಮಾತುಗಳ ಮೂಲ ಖಂಡಿಸಿದರೂ ಅಪ್ಪನನ್ನು ಹಂಚಿಕೊಂಡ ಮಗನ ಕಾರಣಕ್ಕಾಗಿ, ಅಕ್ಕ ಪಕ್ಕದವರಲ್ಲಿ ತನ್ನ ಘನತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಗಂಡನಿಗೆ ಮತ್ತೆ ತನ್ನೊಂದಿಗೆ ಬಾಳಲು ಒಂದು ಅವಕಾಶವನ್ನು ನೀಡಬೇಕಾಗುತ್ತದೆ.

ಇಂಥ ವಸ್ತುವನ್ನು ನಿರ್ವಹಿಸುವಾಗ ಗಂಗಾರವರು ಮತ್ತೆ ವ್ಯವಸ್ಥಿತ ಸಮಾಜದ ನಿಲುವುಗಳಿಗೇ ಪರವಾಗುತ್ತಾರೆ. ವಿವಾಹದ ನಂತರ ಮಹಿಳೆ ತಾನು ತಾರ್ಕಿಕ ಕಾರಣಗಳಿಂದಲೇ ಪುರುಷನೊಂದಿಗೆ ಬದುಕಲು ಬಯಸಿದಾಗ ಗಂಡನ ತಾಯಿಯ ಸಲುವಾಗಿಯಾದರೂ ಮರಳಿ ವಿವಾಹದ ಚೌಕಟ್ಟಿನೊಳಗೇ ಬದುಕಬೇಕು, ವಿವಾಹದ ನಂತರ ಪುಂಡ ಪರಸ್ತ್ರೀ ಸಂಗ ಮಾಡಿದಾಗ, ಮಗುವಿನ ಸಲುವಾಗಿಯಾದರೂ ಅವನನ್ನು ಕ್ಷಮಿಸಿ, ವಿವಾಹದ ಚೌಕಟ್ಟನ್ನು ಭದ್ರಗೊಳಿಸಬೇಕು. ಒಟ್ಟಿನಲ್ಲಿ ವಿವಾಹದ ನಂತರದ ಪ್ರೇಮ ಪ್ರೀತಿಗಳಿಗೆ ತ್ಯಾಗಗಳನ್ನು ಹೆಣ್ಣೇ ಮಾಡಬೇಕಾಗುವುದು ಅನಿವಾರ್ಯ. ವಿವಾಹ

ಬಾಹಿರ ಸಂಬಂಧಗಳನ್ನು ನಮ್ಮ ಸಮಾಜ ಇನ್ನೂ ಒಪ್ಪಿರದ ಕಾರಣ ಮತ್ತು ಇಂಥ ಪ್ರಸಂಗಗಳಲ್ಲಿ ಪವಿತ್ರತೆಯನ್ನು ಕಾಪಾಡಬೇಕಾದವಳು ಹೆಣ್ಣೇ ಹೊರತು ಗಂಡಲ್ಲ ಎಂಬ ತೀರ್ಪು ಪುರುಷ ಪ್ರಧಾನ ಸಮಾಜ ಹೆಣ್ಣಿನ ಮೇಲೆ ಹೊರೆಸಿರುವ ಕಾರಣ ಇಂಥ ಭಾವನೆಗಳನ್ನು ದಾಟಲು ಗಂಗಾರವರಿಂದಲೂ ಸಾಧ್ಯವಾಗಿಲ್ಲ.

ಸಮಸ್ಯೆಗಳಿಗೆ ದಿಢೀರನೆ ಪರಿಹಾರ ಕಂಡುಕೊಳ್ಳುವಲ್ಲಿ ತಟಕ್ಕನೆ ಹುಟ್ಟಿಬಿಡುವ ಆದರ್ಶ ವ್ಯಕ್ತಿಗಳು— ಉದಾಹರಣೆಗೆ 'ಬದುಕಿನ ಬೇರನ್ನರಸಿ' ಕಥೆಯಲ್ಲಿ ಮದುವೆಯ ಪ್ರಾಯ ಮೀರಿದ ಕುಸುಮಳಿಗೆ ತನ್ನ ಮೇಲಧಿಕಾರಿ ಎರಡು ಮಕ್ಕಳ ತಂದೆ, ವಿಧುರ ಇವಳನ್ನು ಮದುವೆಯಾಗಲು ಒತ್ತಡ ತಂದಾಗ ದಿಢೀರನೆ ಪ್ರತ್ಯಕ್ಷನಾಗುವ ಹಳ್ಳಿಯ ಹಳೆ ಗೆಳೆಯ ರಾಜಣ್ಣ, ಮಕ್ಕಳಿಲ್ಲದ ಮಧುರಳಿಗೆ ಅನಾಥ ಮಗುವನ್ನು ದತ್ತು ತೆಗೆದುಕೊಳ್ಳಲು ಪ್ರೇರೇಪಿಸುವ ಸೀತಾಬಾಯಿ, (ಕಡೆ ಪರಿಹಾರ) ಮೈಮೇಲೆ ದೇವರು ಬರುವ, ಗಂಡಸೇ ಅಲ್ಲದವನ ಹೆಂಡತಿಯಾಗಿ ಹಳ್ಳಿಯ ಚುಚ್ಚು ಮಾತುಗಳಿಗೆ ಬಲಿಯಾದ ಸರಸಾ ದಿಢೀರನೆ ನರ್ಸ್ ಟ್ರೈನಿಂಗ್ ಮಾಡಲು ಪ್ರೇರೇಪಿಸುವ ಡಾಕ್ಟರು (ಕಡೆ ದಿಕ್ಕೂಚಿ) ಇಂಥ ಪಾತ್ರಗಳಿಂದ ಕತೆ ತನ್ನ ಸಹಜತೆಯನ್ನು ಕಳೆದುಕೊಳ್ಳುತ್ತದೆ ಎನ್ನುವುದನ್ನು ಗಂಗಾರವರು ಗಮನಿಸಿದರೆ ಉತ್ತಮ. ಸಮಸ್ಯೆಗಳು ಗಹನವಾದ್ದರಿಂದ ಅದರ ಪರಿಹಾರಗಳು ತಾರ್ಕಿಕವಾಗಿರಬೇಕಾಗುತ್ತದೆ. ಹಾಗಾದಾಗಲೇ ಕಥೆಯ ಹಂದರಕ್ಕೆ ಸಹಜ ಬೆಳವಣಿಗೆ ದಕ್ಕುತ್ತದೆ.

ಈ ಎಲ್ಲ ಮಿತಿಯ ಒಳಗೂ ಗಂಗಾರವರ ಕೆಲವು ಕತೆಗಳು ಹೃದಯ ತಟ್ಟುತ್ತವೆ. ಗಂಡನಿಗೆ ಪೊರಕೆ ಸೇವೆ ಮಾಡಿ ಊರು ಬಿಟ್ಟೋಡಿಸುವ 'ಸ್ಫೋಟ' ಕತೆಯ ಲಚ್ಚಿ, ತನ್ನ ಅಣ್ಣ, ಅತ್ತಿಗೆ, ತಾಯಿಯಿಂದಲೇ ಶೋಷಣೆಗೊಳಗಾಗುತ್ತಿದ್ದ ಅನಕ್ಷರಸ್ಥೆ ಅಕ್ಕನನ್ನು ತನ್ನೊಂದಿಗೆ ಪಟ್ಟಣಕ್ಕೆ ಕರೆದೊಯ್ಯುವ ಗೌರಾ ಮುಂತಾದವರೂ, ಆ ಕತೆಗಳೂ ಸ್ವಲ್ಪ ಮಟ್ಟಿಗೆ ನೆನಪಿನಲ್ಲಿ ಉಳಿಯುತ್ತವೆ.

★ **ಶಾಂತಾನಾಗರಾಜ್**

---

## ವೈದ್ಯ ಪರೀಕ್ಷೆ ಯಾರಿಗೆ ?

ತಮ್ಮ ತಾತ ಮುತ್ತಾತಂದಿರು ಮಕ್ಕಳನ್ನು ಹುಟ್ಟಿಸಿದಷ್ಟೇ ಸಲೀಸಾಗಿ, ಇಂದಿನ ಗಂಡಸರು ಹುಟ್ಟಿಸಲು ಅಸಮರ್ಥರು ಎಂದು ಗೊತ್ತೆ ? ಇತ್ತೀಚಿನ ಸಂಶೋಧನೆ ಮತ್ತು ಅಧ್ಯಯನದ ಪ್ರಕಾರ ಇಂದು ಶೇಕಡಾ 60ರಷ್ಟು ಕೇಸುಗಳಲ್ಲಿ ಮಕ್ಕಳಾಗದೆ ಇರುವುದಕ್ಕೆ ಕಾರಣ ಪುರುಷರ 'ಬಂಜೆತನ' (infertility). 1938ರಲ್ಲಿ ಗಂಡಸರ ವೀರ್ಯದ ಸಂಖ್ಯೆ ಒಂದು ಮಿಲಿ ಲೀಟರಿಗೆ, 113 ಮಿಲಿಯನ್ ಇದ್ದರೆ, 1990ರಲ್ಲಿ ಇದೇ ಸಂಖ್ಯೆ 66 ಮಿಲಿಯನ್‌ಗೆ ಇಳಿದುಹೋಗಿದೆ. ಭಾರತದಲ್ಲಿ ಕಡಮೆ ವೀರ್ಯದ ಎಣಿಕೆ ಇರುವ ಪುರುಷರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಇದಕ್ಕೆ ಕಾರಣಗಳು ಗಂಡಸರು ಧರಿಸುವ ಬಿಗಿಯಾದ 'ಬ್ರೀಫ್'ಗಳಿಂದ ಹಿಡಿದು, ವೇಗದ ಬದುಕಿನ ಮಾನಸಿಕ ಒತ್ತಡ, ನಮ್ಮ ಆಹಾರ ಮತ್ತು ಪರಿಸರದಲ್ಲಿರುವ ವಿಪರೀತದ ರಸಾಯನಗಳು. ಒಂದು ಕಾಲಕ್ಕೆ ಮಕ್ಕಳಾಗಲಿಲ್ಲ ಎಂದರೆ ಹೆಣ್ಣಿನದೇ ದೋಷವೆಂದು ತೀರ್ಮಾನಿಸಿ, ಮರುಮದುವೆ ಮಾಡಿಕೊಳ್ಳುತ್ತಿದ್ದರು. ಇಂದಿಗೂ ಮಕ್ಕಳಾಗಲಿಲ್ಲ ಎಂದರೆ ಮೊದಲು ಹೆಂಡತಿಯನ್ನೇ ವೈದ್ಯಕೀಯ ಪರೀಕ್ಷೆಗೆ ಅಟ್ಟುತ್ತಾರೆ. ಇನ್ನಾದರೂ ಈ ನೀತಿ ಬದಲಾಗಬಹುದೆ ?

# ಸ್ವಾತಂತ್ರ್ಯದಿಂದ ಸ್ವಾವಲಂಬನೆಯತ್ತ

## 50ನೇ ಸ್ವಾತಂತ್ರ್ಯೋತ್ಸವ

ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರು ಪೂರ್ಣ ಸ್ವರಾಜ್ಯಕ್ಕೆ ಕರೆ ನೀಡಿದಾಗ ಅವರ ಉದ್ದೇಶವನ್ನು ಈಡೇರಿಸಲು ಇಡೀ ದೇಶ ಒಗ್ಗಟ್ಟಾಗಿ ಎದ್ದು ನಿಂತಿತು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕವೂ ಮಹತ್ವದ ಪಾತ್ರ ವಹಿಸಿದೆ. 1857ರ ಮೊದಲ ಸ್ವಾತಂತ್ರ್ಯ ಹೋರಾಟಕ್ಕೆ ಬಹಳ ಮುಂಚಿತವಾಗಿಯೇ ಈ ರಾಜ್ಯದಲ್ಲಿ ದಂಗೆಯ ಕಹಳೆ ಮತ್ತು ಧ್ವಜ ಮೊಳಗಿತ್ತು. ದಶಕಗಳ ಹಿಂದೆಯೇ ಕಿತ್ತೂರಿನ ರಾಣಿ ಚೆನ್ನಮ್ಮ ವಿದೇಶೀ ಆಳ್ವಿಕೆಯ ವಿರುದ್ಧ ಬಂಡೆದ್ದಿದ್ದಳು. ಸಂಪದ್ಭರಿತ ಸ್ವತಂತ್ರ ದೇಶ ಸ್ವಾತಂತ್ರ್ಯ ಹೋರಾಟಗಾರರ ನಿಸ್ವಾರ್ಥ ಬಲಿದಾನದ ಉದ್ದೇಶ. ತಮ್ಮ ಮಕ್ಕಳಾದರೂ ಸ್ವಚ್ಛವಾದ ಸ್ವಾತಂತ್ರ್ಯದ ಗಾಳಿಯನ್ನು ಸೇವಿಸಲಿ ಎಂಬುದು ಅವರ ಕನಸಾಗಿತ್ತು. ಸುಭದ್ರ ಭಾರತ ನಿರ್ಮಾಣವೂ ಅವರ ಗುರಿಯಾಗಿತ್ತು. ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಈ ದಿನದಂದು ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ಸೇನಾನಿಗಳಿಗೆ ವಂದಿಸುತ್ತದೆ. ಕರ್ನಾಟಕ ನಮ್ಮ ರಾಷ್ಟ್ರ ಪಿತಾಮಹರ ಆದರ್ಶಗಳನ್ನು ಅನುಸರಿಸಿ ಜಾತ್ಯತೀತತೆ ರಾಷ್ಟ್ರೀಯ ಸಮಗ್ರತೆ ಮತ್ತು ಸರ್ವರ ಕಲ್ಯಾಣ ಸಾಗಿಸುವ ಮೂಲಕ ಮಾದರಿ ರಾಜ್ಯವೆನಿಸಿದೆ.

ಕರ್ನಾಟಕ ಆರ್ಥಿಕ ಉದಾರೀಕರಣದ ಮುಂಚೂಣಿಯಲ್ಲಿದ್ದು, ಶ್ರೀ ಜೆ. ಎಚ್. ಪಟೇಲರ ಸಮರ್ಥ ಮಾರ್ಗ ದರ್ಶನದಲ್ಲಿ ಸರ್ವತೋಮುಖ ಪ್ರಗತಿ ಸಾಧಿಸುತ್ತಿದ್ದು ಮಾದರಿ ರಾಜ್ಯವಾಗಿ ರೂಪುಗೊಳ್ಳುತ್ತಿದೆ. 50ನೇ ಸ್ವಾತಂತ್ರ್ಯೋತ್ಸವ ಈ ಶುಭ ದಿನದಂದು ಕರ್ನಾಟಕ ಸರ್ಕಾರ ಸ್ವಾತಂತ್ರ್ಯ ಹೋರಾಟಗಾರರ ಕನಸುಗಳನ್ನು ನನಸಾಗಿಸುವ ತನ್ನ ಧ್ಯೇಯಗಳನ್ನು ಪುನರ್ ಉಚ್ಚರಿಸುತ್ತಿದೆ. ಸಬಲ ಹಾಗೂ ಸಮೃದ್ಧ ಕರ್ನಾಟಕ ನಿರ್ಮಾಣದತ್ತ, ಜನಸಾಮಾನ್ಯರ ಆಶೋತ್ತರಗಳನ್ನು ಈಡೇರಿಸಲು ಸರ್ಕಾರ ಕಂಕಣಬದ್ಧ.

### ಕೃಷಿ ಕ್ಷೇತ್ರಕ್ಕೆ ಆದ್ಯತೆ

ಮೊದಲ ಬಾರಿಗೆ ನವೀನ ಕೃಷಿ ನೀತಿ. ತೋಟಗಾರಿಕೆ ಮತ್ತು ಪುಷ್ಪೋದ್ಯಮ ಉತ್ಪಾದನೆಗಳ ರಫ್ತಿಗೆ ಹೆಚ್ಚಿನ ಒತ್ತು.

### ವಸತಿ ಹೀನರಿಗೆ ವರದಾನ

ಸರ್ಕಾರವು ವಸತಿ ಸಮಸ್ಯೆಯನ್ನು ಅದರಲ್ಲೂ ಮುಖ್ಯವಾಗಿ ಆರ್ಥಿಕವಾಗಿ ಹಿಂದುಳಿದ ವರ್ಗಗಳ ಸಮಸ್ಯೆಯನ್ನು ಪರಿಹರಿಸಲು ಬದ್ಧವಾಗಿದೆ.

**ಹಳ್ಳಿಗಳಿಗೆ ಕುಡಿಯುವ ನೀರು** :—ಶುದ್ಧವಾದ ಕುಡಿಯುವ ನೀರಿನ ಪೂರೈಕೆಗೆ ಸರ್ಕಾರದ ಅತ್ಯುನ್ನತ ಆದ್ಯತೆ. ಗ್ರಾಮಾಂತರ ನೀರು ಸರಬರಾಜಿಗಾಗಿ 252.14 ಕೋಟಿ ರೂಪಾಯಿಗಳು.

**ಅರಣ್ಯೀಕರಣ** :—ಕಾಡುಗಳನ್ನು ರಕ್ಷಿಸಲು ವನ ವಿಜ್ಞಾನ ಕೇಂದ್ರಗಳ ಸ್ಥಾಪನೆ.

**ವಿದ್ಯುತ್ ಉತ್ಪಾದನೆಗೆ ಆದ್ಯತೆ** :—ರಾಜ್ಯದ ವಿದ್ಯುತ್ ಬೇಡಿಕೆಯನ್ನು ಪೂರೈಸಲು ಹಲವು ಯೋಜನೆಗಳ ನಿರ್ಮಾಣ ಕಾರ್ಯಾರಂಭ. ಪಶ್ಚಿಮ ಕರಾವಳಿಯಲ್ಲಿ ಬಾರ್ಜ್‌ಮೌಂಟೆಡ್ ಯೋಜನೆಗಳ ಮುಖಾಂತರ 400 ಮೆ.ವಾ. ವಿದ್ಯುತ್.

**ಆರೋಗ್ಯ ಸೇವೆ ಸುಧಾರಣೆ** :—ಬಡ ಜನರಿಗೆ ಅತ್ಯಾಧುನಿಕ ವೈದ್ಯಕೀಯ ಸವಲತ್ತುಗಳನ್ನು ಒದಗಿಸಲು ಸೂಪರ್ ಸ್ಪೆಷ್ಯಾಲಿಟಿ ಆಸ್ಪತ್ರೆಗಳು. ಇದಕ್ಕಾಗಿ 550 ಕೋಟಿ ರೂ. ಮೀಸಲು.

**ಶಿಕ್ಷಣ** :—ಬಾಲಕಿಯರ ಶಿಕ್ಷಣಕ್ಕೆ ಪ್ರಥಮ ಆದ್ಯತೆ. ಶಾಲೆಗಳೇ ಇಲ್ಲದ 1,264 ಸ್ಥಳಗಳಲ್ಲಿ ಶಾಲಾ ಸೌಕರ್ಯ. 9,350 ಶಿಕ್ಷಕರ ನೇಮಕ.

**ಮಹಿಳಾ ಮತ್ತು ಮಕ್ಕಳ ಕಲ್ಯಾಣ** :—ಸರ್ಕಾರಿ ಉದ್ಯೋಗಗಳಲ್ಲಿ ಕಾಲೇಜುಗಳಲ್ಲಿ ಮತ್ತು ಪಾಲಿಟೆಕ್ನಿಕ್‌ಗಳಲ್ಲಿ ಮಹಿಳೆಯರಿಗೆ ಮೀಸಲಾತಿ.

**ಸಮಾಜ ಕಲ್ಯಾಣ ಕಾರ್ಯಗಳು** :—

- 8.40 ಕೋಟಿ ರೂ. ವೆಚ್ಚದಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳಿಗಾಗಿ 30 ವಿದ್ಯಾರ್ಥಿನಿಲಯಗಳು.
- ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ ರೈತರಿಗಾಗಿ 5,000 ಕೊಳವೆ ಬಾವಿಗಳು.
- ಹಿಂದುಳಿದ ಜಾತಿಗಳವರಿಗೆ 35.50 ಕೋಟಿ ರೂ. ಮತ್ತು ಅಲ್ಪಸಂಖ್ಯಾತರಿಗೆ 32.77 ಕೋಟಿ ರೂ. ನೆರವು.

ಸ್ವಾತಂತ್ರ್ಯೋತ್ಸವದ ಶುಭಾಶಯಗಳು

ಕರ್ನಾಟಕ—ನಿರಂತರ ಪ್ರಗತಿಗೆ ನಿರ್ಣಾಯಕ ಹೆಜ್ಜೆಗಳು



ಪ್ರೀತಿಯ ಅಚಲಾ.

ಇತ್ತೀಚೆಗೆ ಮಧ್ಯಪ್ರದೇಶ ಮತ್ತು ತಮಿಳುನಾಡಿನಲ್ಲಿ ಪದೇ ಪದೇ ಪ್ರವಾಸ ಮಾಡುತ್ತಿದ್ದಾಗ ಗಮನಕ್ಕೆ ಬಂದ ಒಂದು ಸಂಸ್ಕೃತಿಯನ್ನು ಕುರಿತು ಬರೆಯಲೇ ಬೇಕೆನಿಸಿದ್ದರಿಂದ ಈ ಪತ್ರ ಬರೆಯುತ್ತಿದ್ದೇನೆ. ಒಂದು ಕಾಲದಲ್ಲಿ ಕಾಶಿಗೆ ಹೋಗಿ ವಾಪಸ್ ಬಂದವರನ್ನು ಊರ ಬಾಗಿಲಲ್ಲೇ ಊರ ಮಂದಿಯೆಲ್ಲಾ ಮಂಗಳ ವಾದ್ಯಗಳೊಡನೆ ಸ್ವಾಗತಿಸಿ ಊರ ಓಣಿ ಓಣಿಗಳಲ್ಲಿ ಮೆರವಣಿಗೆ ಮಾಡಿಸುತ್ತಿದ್ದರಂತೆ. ಅಂದರೆ ಆ ಕಾಲದಲ್ಲಿ ಪ್ರವಾಸ ಹೋಗುವುದೂ ದುಸ್ತರವಾಗಿತ್ತು. ಹೋದವರು ವಾಪಸ್ ಕ್ಷೇಮವಾಗಿ ಬರುವುದೂ ದುಸ್ತರವಾಗಿತ್ತು. ಇಂದಿನ ಕಾಲದಲ್ಲಿ ಮೊದಲನೆಯದು ಖಂಡಿತಾ ದುಸ್ತರವಲ್ಲ. ಹೆಚ್ಚಿದ ಬಸ್ಸು ರೈಲು ವಿಮಾನಗಳ ಸೌಲಭ್ಯಗಳು ಮತ್ತು ಎಲ್ಲರಲ್ಲೂ ಹುಟ್ಟಿರುವ ಪ್ರವಾಸ ಪ್ರಿಯತೆ. ಎರಡನೆಯದು ಮಾತ್ರ ಇಂದಿಗೂ ದುಸ್ತರವೇ. ಮೊನ್ನಿನ ಅಮರನಾಥ ಯಾತ್ರೆಯ ಫಲಿತಾಂಶ ನೆನಪಿದೆಯಲ್ಲ !

ನಾನು ಇದನ್ನೆಲ್ಲ ಯಾಕೆ ಬರೆಯುತ್ತಿದ್ದೇನೆಂದರೆ ಪ್ರವಾಸ ತಂದುಕೊಡುವ ಅನುಭವವಿದೆಯಲ್ಲ ಅದು ಅತ್ಯಂತ ವಿಸ್ತಾರವಾದುದು. ಮತ್ತು ನಮ್ಮನ್ನು ಅನೇಕ ಚಿಂತನೆಗಳಿಗೆ ಒಡ್ಡುವಂಥದ್ದು.

ನಗರಗಳು ಬೆಳೆದಂತೆಲ್ಲ ಸಿಟಿ ಬಸ್ಸುಗಳು ಅನಿವಾರ್ಯ ತಾನೆ. ಮಧ್ಯಪ್ರದೇಶದ ಇಂದೋರ್ ಮತ್ತು ಭೂಪಾಲ್‌ಗಳಲ್ಲಿ ಸರ್ಕಾರವಲ್ಲದೆ ನಗರಸಭೆಗಳೂ ಸಿಟಿ ಬಸ್ಸನ್ನು ಓಡಿಸುತ್ತವೆ. ಅಲ್ಲಿ ನಮ್ಮಲ್ಲಿರುವಂತೆ ದೊಡ್ಡ ಕೆಂಪು ಬಸ್ಸುಗಳಿಲ್ಲ. ಬದಲಿಗೆ ಮೆಟಡಾರ್ ವ್ಯಾನ್‌ಗಳಿಗಿಂತ ಸ್ವಲ್ಪ ದೊಡ್ಡದಾದ ಮಿನಿ ಬಸ್ಸುಗಳೇ ಅಲ್ಲೆಲ್ಲಾ. ಆ ಬಸ್ಸುಗಳು ಎಷ್ಟು ಕುಳ್ಳಗಿರುತ್ತವೆ ಎಂದರೆ ಸ್ಟ್ಯಾಂಡಿಂಗ್ ಸೀಟುಗಳು, ಬಾಗಿಲಲ್ಲಿ ತೂಗಾಡುತ್ತಾ ಹೋಗುವುದು ಸಾಧ್ಯವೇ ಇಲ್ಲ. ಆದರೂ ಅಲ್ಲಿ ಒಂದು ಅಲಿಖಿತ ನಿಯಮವಿದೆ. ಮಹಿಳೆಯರು ಬಂದರೆ ಇಕ್ಕಟ್ಟಿನಲ್ಲೂ ಜರುಗಿಕೊಂಡಾದರೂ ಪುರುಷರು ಸೀಟು ಕೊಡಬೇಕು. ಮುಖದ ತುಂಬಾ ಮುಸುಕು ಹೊದ್ದ ಗ್ರಾಮೀಣ ಮಹಿಳೆಯರೂ ಯಾವ ಯಗ್ಗು, ಬಿನ್ನಾಣಗಳಿಲ್ಲದೆ ಪುರುಷರ ಪಕ್ಕದಲ್ಲಿ ಇರುಕಿಕೊಂಡೇ ಕುಳಿತುಕೊಳ್ಳುತ್ತಾರೆ. ಮತ್ತು ತುಂಬ ಗಮನಿಸಬೇಕಾದ ಅಂಶವೆಂದರೆ ಮಹಿಳೆಯರು ಹಾಗೆ ಒತ್ತಿಕೊಂಡು ಕುಳಿತಾಗ ಯಾವ ವಿಕೃತ ಕುಚೇಷ್ಟೆಯನ್ನೂ ಮಾಡದೆ ಪುರುಷರು ಬಹಳ ಸಭ್ಯತೆಯಿಂದ ನಡೆದುಕೊಳ್ಳುತ್ತಾರೆ.

ತಮಿಳುನಾಡಿನಲ್ಲಿ ಇದಕ್ಕೆ ಬೇರೆಯದೇ ಆದ ಸಂಸ್ಕೃತಿ ಇದೆ. ಈರೋಡು, ಸೇಲಂ, ಕೊಯಮತ್ತೂರು ಮುಂತಾದ ಕಡೆಗಳಲ್ಲಿ ಬೆಂಗಳೂರಿನಂತಹ ದೊಡ್ಡ ಹಸಿರು ಬಸ್ಸುಗಳಿವೆ. ಈ ಬಸ್ಸುಗಳಲ್ಲಿ ಎಲ್ಲೂ 'ಮಹಿಳೆಯರಿಗೆ' ಎಂದಾಗಲೀ, ಮಹಿಳೆಯ ಚಿತ್ರವನ್ನಾಗಲೀ ಬರೆದಿಲ್ಲ. ಆದರೆ ಮುಂದಿನ ಎರಡೂ ಪಕ್ಕಗಳ ನಾಲ್ಕು ಸಾಲುಗಳು ಮಹಿಳೆಯರಿಗೆ ಮಾತ್ರ ಮೀಸಲು. ಅದರಲ್ಲಿ ಅಪ್ಪಿತಪ್ಪಿಯೂ ಪುರುಷರು ಕೂಡುವುದಿಲ್ಲ. ಅಕಸ್ಮಾತ್ ಖಾಲಿಯಿದ್ದು ಕುಳಿತರೂ ಒಬ್ಬ ಮಹಿಳೆ ಹತ್ತಿದರೂ ಕುಳಿತ ಮೂವರೂ ಮಹನೀಯರೂ ಎದ್ದುಬಿಡುತ್ತಾರೆ. ಒಬ್ಬ ಮಹಿಳೆ ಕುಳಿತು ಪಕ್ಕದಲ್ಲಿ ಸೀಟು ಖಾಲಿಯಿದ್ದರೂ ಪುರುಷರು ನಿಂತೇ ಇರುತ್ತಾರೆ. ಅದು ಮಹಿಳೆಯ ಹಕ್ಕಿನ ಸೀಟು ಮುಂದಿನ ಸ್ಟಾಪಿನಲ್ಲಿ ಹತ್ತಬಹುದಾದ ಮಹಿಳೆಗೆ ಮೀಸಲಿರುತ್ತದೆ.

ಇದನ್ನೆಲ್ಲಾ ಕಂಡಾಗ ನಮ್ಮ ಕರ್ನಾಟಕದ ಸಂಸ್ಕೃತಿ ಎತ್ತ ಸಾಗಿದೆ ಎನಿಸಿ ಬೇಸರವಾಗುತ್ತದೆ. 'ಮಹಿಳೆಯರಿಗೆ' ಎಂದು ಬರೆದಿದ್ದರೂ, ಮಹಿಳೆಯ ಚಿತ್ರ ಬರೆದಿದ್ದರೂ ಆ ಸೀಟುಗಳಲ್ಲಿ ಪುರುಷರೇ ರಾರಾಜಿಸುತ್ತಿರುತ್ತಾರೆ. ಹೆಂಗಸರ ಸೀಟಿನಲ್ಲಿ ಕುಳಿತು ಹೆಣ್ಣಿನ ಮೇಲೇ ಕುಳಿತಂತೆ ಬೀಗುತ್ತಿರುತ್ತಾರೆ. ವೃದ್ಧೆಯರೂ, ಮಕ್ಕಳನ್ನು ಹೊತ್ತ ಮಾತೆಯರೂ ಒಂಟಿ ಕೈಯಲ್ಲಿ ಮೇಲಿನ ಕೋಲು ಹಿಡಿದು ತೂಗಾಡುತ್ತಿದ್ದರೂ ಈ ಪುರುಷ ಶ್ರೇಷ್ಠರಿಗೆ ಪರರ ಹಕ್ಕನ್ನು ಬಿಟ್ಟುಕೊಡುವ ಸೌಜನ್ಯವಿಲ್ಲ. ಹಕ್ಕಿನಿಂದ ಕೇಳಿದರಂತೂ ಜಗಳಕ್ಕೇ ಸಿದ್ಧ ! ಮನುಷ್ಯನ ಒಳಗಿನಿಂದಲೇ ಹುಟ್ಟದ ಸುಸಂಸ್ಕೃತಿ ಹೊರ ಮಾತುಗಳಿಂದ ಹೇಗೆ ಪಲ್ಲವಿಸೀತು ? ಈ ಸಮಸ್ಯೆ ದಿನದಿಂದ ದಿನಕ್ಕೆ ವೃದ್ಧಿಸುತ್ತಿದೆ ಮತ್ತು ಮಹಿಳೆಯರು ಮೌನ

ವಾಗಿ ತಮ್ಮ ಹಕ್ಕುಗಳನ್ನು ಕಬಳಿಸುತ್ತಿರುವ ಪುರುಷಾಧಮರನ್ನು ಸಹಿಸುತ್ತಿದ್ದಾರೆ.

ಇತ್ತೀಚೆಗೆ ವಿಧಾನಸಭೆಯಲ್ಲಿ ಮಹಿಳೆಯರ ಸೀಟಿನಲ್ಲಿ ಕುಳಿತ ಪುರುಷರಿಗೆ ದಂಡ ಶುಲ್ಕ ವಿಧಿಸಬೇಕು ಎನ್ನುವ ಪ್ರಸ್ತಾಪ ಬಂದಾಗ "ಸುಂದರ ಸ್ತ್ರೀಯರ ಪಕ್ಕದಲ್ಲಿ ನೂರು ರೂಪಾಯಿ ದಂಡ ಕೊಟ್ಟಾದರೂ ತಾವಲ್ಲಿ ಕೂಳ್ಳಲು ಸಿದ್ಧ" ಎಂದು ರಸಿಕತೆಯ ಹೊಲಸು ವ್ಯಕ್ತಿತ್ವ ಪ್ರದರ್ಶಿಸಿದ ಆಳುವವರನ್ನು ಕಂಡು ಕನ್ನಡ ಮಹಿಳೆ ನಿಡುಸುಯ್ಯಬೇಕಷ್ಟೆ. ಕಾಯುವ ಬೇಲಿಗಳೇ ಕಬಳಿಸಲು ಮುಂದಾದರೆ ಮತ್ತಾವ ಭರವಸೆ ?

ಕನ್ನಡದ ಸಂಸ್ಕೃತಿ ನೆಲ ಕಚ್ಚಿ ಸಾರುತ್ತಿದೆ. ಅದರಲ್ಲೂ ಮಹಿಳೆಯರ ವಿಚಾರಕ್ಕೆ ಬಂದಾಗ ವಿಕೃತ ಮನಸ್ಸುಗಳೇ ತಾಂಡವವಾಡುತ್ತವೆ. ಇವಕ್ಕೆಲ್ಲ ಪರಿಹಾರವೆಂದರೆ ಹಕ್ಕುಗಳಿಗಾಗಿ ಹೋರಾಟ ಮಾಡುವುದೊಂದೆ. ಮಹಿಳೆ ಜಾಗೃತಳಾಗಬೇಕು, ಒಗ್ಗಟ್ಟಾಗಬೇಕುಮತ್ತು ಹಕ್ಕೊತ್ತಾಯಗಳನ್ನು ಮಾಡುತ್ತಲೇ ಇರಬೇಕು.

ಇತಿ ನಿನ್ನ

**ಶತಬಿಷಾ**

---

## ನ್ಯಾಯಕ್ಕಾಗಿ 'ಕಿಚನ್ ಸ್ಟ್ರೈಕ್'

ಆಗಸ್ಟ್ 11ರಂದು ಕಾಸರಗೋಡ್–ಕನ್ನೂರ್ ಸರಹದ್ದಿನ ಕೊಲ್ಲಾಡ ಮತ್ತು ಕಂಪಲ್ಲೂರ್ ಗ್ರಾಮದ ಮಹಿಳೆಯರು ಅಡಿಗೆಮನೆಯನ್ನು ಬಹಿಷ್ಕರಿಸಿ ಹೊರಬಂದು ಒಂದು ರೀತಿಯಲ್ಲಿ ಚರಿತ್ರೆ ನಿರ್ಮಿಸಿದರು. ಮೂರು ವರ್ಷಗಳ ಹಿಂದೆ, ಇಪ್ಪತ್ತೆರಡು ವರ್ಷದ ಗೃಹಿಣಿಯೊಬ್ಬಳ ಮೇಲೆ ಸೇಂಟ್ ಏಂಜಿಲಸ್ ಕೋಟೆಯೊಳಗೆ ಎಂಟು ಮಂದಿ ಅತ್ಯಾಚಾರ ಎಸಗಿದ್ದ ಪ್ರಕರಣದಲ್ಲಿ, ಇಂದಿನವರೆಗೂ ದುಷ್ಕರ್ಮಿಗಳಿಗೆ ಶಿಕ್ಷೆಯಾಗಿಲ್ಲ. ಪೋಲೀಸರು ಪುರಾವೆ ಇಲ್ಲವೆಂದು ಹೇಳುತ್ತಾ ಕೇಸನ್ನು ಮುಚ್ಚಿಹಾಕಿದರು. ಕೇಸನ್ನು ತೆರೆದು ಪುನರ್ ತನಿಖೆ ನಡೆಯಲೇಬೇಕೆಂಬ ಒತ್ತಾಯದೊಂದಿಗೆ, ಅನ್ಯಾಯದ ವಿರುದ್ಧ ಪ್ರತಿಭಟಿಸಿ ಈ ಮಹಿಳೆಯರು ಮೆರವಣಿಗೆ ಹೊರಟರು. 'ತಮ್ಮಂಥಾ ದಮನಕ್ಕೊಳಗಾದ ಮಹಿಳೆಯರೂ ಕೂಡಾ, ಪ್ರತಿಭಟಿಸುವ ಹಕ್ಕು ಮತ್ತು ದಿಟ್ಟತನವನ್ನು ಪಡೆದಿದ್ದೇವೆ. ಏನು ನಡೆದರೂ ಅಡಿಗೆಮನೆಯಲ್ಲಿ ಕೈಕಟ್ಟಿ ಕುಳಿತುಕೊಳ್ಳುವುದಿಲ್ಲ. ಸಮಯ ಬಿದ್ದಾಗ ಅಡಿಗೆಮನೆಯಿಂದ ಹೊರಬಿದ್ದು ಬೀದಿಗಿಳಿದು ನ್ಯಾಯಕ್ಕಾಗಿ ಒತ್ತಾಯಿಸಬಲ್ಲೆವು' ಎಂದು ಈ ಚಳುವಳಿಯ ಮೂಲಕ ಅಧಿಕಾರಿಗಳಿಗೆ ನೆನಪಿಸಲು ಇಚ್ಛಿಸಿದ ಈ ಗೃಹಿಣಿಯರು, ಅಂದು ಬೆಳಗ್ಗಿನಿಂದಾ ಧೋ ಎಂದು ಸುರಿದ ಭಾರೀ ಮಳೆಯಲ್ಲೂ, ಅಧಿಕ ಸಂಖ್ಯೆಯಲ್ಲಿ ಒಗ್ಗೂಡಿ ಬೆಳಗ್ಗೆ ಏಳು ಗಂಟೆಗೇ ಮನೆ ಬಿಟ್ಟವರು, ಇಡೀ ದಿನ ಅಡಿಗೆಮನೆಯನ್ನು ಬಹಿಷ್ಕರಿಸಿ, ಮೆರವಣಿಗೆ ಹೊರಟರು.

ಇತ್ತೀಚೆಗೆ ಮಹಿಳೆಯ ಮೇಲಿನ ಅತ್ಯಾಚಾರದ ಪ್ರಕರಣಗಳು ವಿಪರೀತವಾಗಿ ನ್ಯಾಯದ ಹಾದಿ ಹನುಮನ ಬಾಲವಾಗಿ ಬೆಳೆದು ನಿಂತಿದೆ. ನ್ಯಾಯಕ್ಕಾಗಿ ಕಾದು ಸಿಟ್ಟಿಗೆದ್ದ ಮಹಿಳೆಯರು, 'ಮಹಿಳಾ ನ್ಯಾಯ ವೇದಿಕೆ' (Women's Justice Forum) ಕರೆ ಕೊಟ್ಟು ಒಗ್ಗೂಡಿಸಿದ ಈ 'ಕಿಚನ್ ಸ್ಟ್ರೈಕ್' ಹನ್ನೊಂದು ಗಂಟೆಗಳ ಕಾಲ ಯಶಸ್ವಿಯಾಗಿ ನಡೆಯಲು ನೆರವಾದರು. ಈ ಮಹಿಳೆಯರ ಗಂಡಂದಿರೂ ಪತ್ನಿಯರ ನೆರವಿಗೆ ಬಂದು 'ಸಹಾಯಕ ಸಮಿತಿ'ಯೊಂದನ್ನು ಕಟ್ಟಿ ಸಹಕಾರ ನೀಡಿದರು. ಮಧ್ಯಾಹ್ನ 'ಸ್ವಾಭಿಮಾನ ಸಮ್ಮೇಳನ' ಏರ್ಪಡಿಸಿದ್ದ ಈ ಮಹಿಳೆಯರು, ಮಹಿಳೆಯರ ಮೇಲಿನ ಎಲ್ಲ ಬಗೆಯ ಶೋಷಣೆ, ಅತ್ಯಾಚಾರದ ವಿರುದ್ಧ ಹೋರಾಡುವ ಪಣ ತೊಟ್ಟರು. ಸ್ತ್ರೀವಾದಿ ಚಳುವಳಿಗಾರರಾದ ಕೆ. ಅಜಿತಾ ಈ ಸಮ್ಮೇಳನವನ್ನು ಉದ್ಘಾಟಿಸಿ ಮಾತನಾಡಿ, ಅತ್ಯಾಚಾರಕ್ಕೆ ಒಳಗಾದ ಗೃಹಿಣಿಗೆ ನ್ಯಾಯ ದೊರಕಬೇಕೆಂದು ಒತ್ತಿ ಹೇಳಿದರು. ಈ ಸಮ್ಮೇಳನದಲ್ಲಿ ಅತ್ಯಾಚಾರಕ್ಕೆ ಒಳಗಾದ ಮಹಿಳೆ, ಆಕೆಯ ಕುಟುಂಬವೂ ಭಾಗವಹಿಸಿತ್ತು.

# ನೋವಿನಿಂದ ನೆಮ್ಮದಿಗೆ....

★ ಬಿಂದಿಯಾ

ಪ್ರತಿಯೊಬ್ಬರನ್ನೂ ಒಂದಲ್ಲ ಒಂದು ಸಮಸ್ಯೆ ಕಾಡುತ್ತಿದೆ. ನಮ್ಮಲ್ಲಿ ಕೆಲವರು ಆ ಸಮಸ್ಯೆಗಳನ್ನು ಎದುರಿಸುವುದರಲ್ಲಿ ನಿಪುಣರಿರಬಹುದು, ಇಲ್ಲದಿರ ಬಹುದು. ಸಮಸ್ಯೆಗಳಿದ್ದೂ ಹೊರಹಾಕದೆ, ಒಳಗೇ ಕೂಡಿಹಾಕಿ ಕೊರಗುತ್ತಲೂ ಇರಬಹುದು. ಇಂದು ಹಗಲು ರಾತ್ರಿಗಳ ನೆಮ್ಮದಿಯನ್ನು ಕಳೆದುಕೊಂಡು, ಬದುಕಿನ ಕತ್ತಲೆಯಲ್ಲಿ ಕರಗಿ ಹೋಗುವ ಜನರಿಗೆ ಬೆಳಕು ನೀಡುವ ಅನೇಕ ಸಂಘ, ಸಂಸ್ಥೆ, ಸಂಘಟನೆಗಳಿವೆ. ಇವುಗಳಲ್ಲಿ 'ಆಪ್ತ ಸಲಹಾ ಕೇಂದ್ರ'ಗಳು ಬಹಳ ಮುಖ್ಯ ಪಾತ್ರ ವಹಿಸಿವೆ. ತಮ್ಮ ಬದುಕಿನ ಸಮಸ್ಯೆ ಅತಿಯಾಗಿ ಕಾಡಿ, ಬದುಕನ್ನೆಲ್ಲ ಆವರಿಸಿ ನಿಂತಾಗ, ಇಂಥಾ ಸಂಘ, ಸಂಸ್ಥೆಗಳ ನೆರವನ್ನು ಪಡೆದ 'ಬಿಂದಿಯಾ', ಭಿನ್ನತೆಯ ತಮ್ಮ 'ಒಳ ಜಗತ್ತಿ'ನಿಂದ ಹೊರಗೆ ಹೆಜ್ಜೆ ಹಾಕಿದರು. ಇಂದು ಇವರು 'ಮಾರ್ಗದರ್ಶಿ' ಸಂಸ್ಥೆಗೆ ಕೆಲಸ ಮಾಡು ತ್ತಿರುವುದಲ್ಲದೆ, ಸ್ವತಃ 'ಆಪ್ತ ಸಲಹಾ ತರಪೇತಿ' ಪಡೆಯುತ್ತಿರುವ ಮಹಿಳೆ. ನೋವಿನಿಂದ ನೆಮ್ಮದಿಗೆ ಹೆಜ್ಜೆ ಇಟ್ಟ ತಮ್ಮ ಕತೆಯನ್ನು ಈಕೆ 'ಅಚಲ' ದೊಂದಿಗೆ ಹಂಚಿಕೊಂಡಿದ್ದಾರೆ.

ಆಪ್ತಸಲಹೆ (ಕೌನ್ಸಿಲಿಂಗ್) ನೀಡುವುದು ಒಂದು ಕಲೆ. ಸಹಜವಾದ ಮಾನವೀಯ ಕಳಕಳಿ, ಸಹೃದಯತೆ, ಇತರರ ಬದುಕನ್ನು ಹಸನಾಗಿಸುವ ಮೂಲಭೂತ ಆಸ್ಥೆ, ಆಸಕ್ತಿ, ಒಂದಿಷ್ಟು ತರಪೇತು, ಇವೆಲ್ಲವೂ ನಿಮ್ಮನ್ನು ಆಪ್ತಸಲಹಾಗಾರರನ್ನಾಗಿ ಮಾಡಬಲ್ಲವು. ಕೌನ್ಸಿಲಿಂಗ್ ಎಂದರೆ 'ಉಪದೇಶ' ನೀಡುವುದಲ್ಲ, ವೈಯಕ್ತಿಕ ಸಮಸ್ಯೆ ಗಳನ್ನು ಹೊತ್ತು ಬಂದವರನ್ನೆಲ್ಲ 'ರೋಗಿ'ಗಳಂತೆ ಕಾಣು ವುದಲ್ಲ, ಅವರ ಸಮಸ್ಯೆಗಳಿಗೆಲ್ಲ ಪರಿಹಾರ ಕೊಡಬಲ್ಲೆ ಎಂಬ ಭ್ರಮೆಯೂ ಅಲ್ಲ.

ಆಪ್ತಸಲಹಾಗಾರ ಇಂಥಾ ವ್ಯಕ್ತಿಗಳೊಡನೆ ಹಲ ವಾರು ಭೇಟಿಗಳಲ್ಲಿ, ಸಹೃದಯತೆಯ ವಾತಾವರಣದಲ್ಲಿ ವಿವರಗಳನ್ನು ತಿಳಿದು, ಸಮಸ್ಯೆ ದೈಹಿಕವೆ, ಜೈವಿಕವೆ, ಮಾನಸಿಕವೆ, ಸಾಮಾಜಿಕ-ಸಾಂಸ್ಕೃತಿಕ ಕಾರಣದಿಂದ ಉದ್ಭವವಾದದ್ದೇ, ಎಂದೆಲ್ಲ ವಿಶ್ಲೇಷಣೆ ಮಾಡಿ ಸಮಸ್ಯೆ ಯನ್ನು ಅರ್ಥಮಾಡಿಕೊಳ್ಳುತ್ತಾನೆ. ಆಪ್ತಸಲಹಾಗಾರ, ಬಂದ ಇಂಥಾ ವ್ಯಕ್ತಿಗೆ ತನ್ನ ಸಮಸ್ಯೆಯ ಪರಿಹಾರವನ್ನು ತಾನೇ ಕಂಡುಕೊಳ್ಳಲು ಸಹಾಯಕನಾಗುತ್ತಾನೆ. ತನ್ನ ಆದ್ಯತೆಗಳನ್ನು ತಿಳಿಯಲು, ವಾಸ್ತವವನ್ನು ಎದುರಿಸಲು, ಬದಲಾಗಲು, ಬದಲಾಯಿಸಲು ನೆರವಾಗುತ್ತಾನೆ. ಎಷ್ಟೋ ಬಾರಿ ತಮ್ಮ ಸಮಸ್ಯೆಯನ್ನು ಒಂದೇ ದಿಕ್ಕಿನಿಂದ ನೋಡಿ ಧೃತಿಗೆಟ್ಟವರಿಗೆ ಆಪ್ತಸಲಹಾಗಾರ ಹಲವು ಹತ್ತು ಹಾದಿಗಳನ್ನು, ಸಾಧ್ಯತೆಯನ್ನು ತೋರಿ ಸುತ್ತಾನೆ. ಅದರ ನಂತರವೂ ಅವು ಆ ವ್ಯಕ್ತಿಯ ಆಯ್ಕೆ ಯಾಗಿರುತ್ತದೆ, ಆ ವ್ಯಕ್ತಿಯ ಬದುಕಾಗಿರುತ್ತದೆ. ಅಲ್ಲಿ ಹರಿದ ಕತ್ತಲಿಗೆ ಒಂದಿಷ್ಟು ಬೆಳಕು ಚೆಲ್ಲುವುದು, ಕಂಡಿ ಲ್ಲದ ವಸ್ತುಗಳನ್ನು ಕಾಣಿಸುವ ಪ್ರಯತ್ನ ಮಾತ್ರ ಆಪ್ತ ಸಲಹಾಗಾರನದು. ಅವು ಸ್ಪಷ್ಟವಾದಂತೆ, ವ್ಯಕ್ತಿಗೇ ತನ್ನ ಸಮಸ್ಯೆ ನಿಖರವಾಗಿ ಕಾಣುತ್ತದೆ. ಒಮ್ಮೆ ಸಮಸ್ಯೆ ಅರ್ಥವಾದರೆ, ಬಹುಶಃ ಪರಿಹಾರ ಅಷ್ಟು ಕಷ್ಟದ್ದಲ್ಲ.

ಹದಿನೈದು ವರ್ಷಗಳಿಂದ ಅಸ್ತಿತ್ವದಲ್ಲಿರುವ 'ಪ್ರಸನ್ನ ಆಪ್ತ ಸಲಹಾ ಕೇಂದ್ರ' ಸಾವಿರಾರು ಜನ ನೊಂದವರಿಗೆ ಜೀವನದಲ್ಲಿ ನೆಮ್ಮದಿ ತರುವ ದಿಕ್ಕಿನಲ್ಲಿ ಪ್ರಯತ್ನಿಸುತ್ತಿ ರುವ ಕೇಂದ್ರ. ಈ ಕೇಂದ್ರಕ್ಕೆ ಶ್ರೀಮತಿ ಪಂಕಜ ಅವರು ಆಧಾರವಾಗಿ ನಿಂತಿದ್ದಾರೆ. ಮಾರ್ಗದರ್ಶಕರಾಗಿ, ಸಂಪ ನ್ಮೂಲ ವ್ಯಕ್ತಿಗಳಾಗಿ – ಸಲಹೆಗಾರರಾಗಿ – ಕಾರ್ಯಕರ್ತ ರಾಗಿ ಜವಾಬ್ದಾರಿ ನಿರ್ವಹಿಸುತ್ತಿರುವ ನಿಮ್ಹಾನ್ಸ್‌ನ ಡಾ. ಮಾಳವಿಕಾ ಕಪೂರ್, ಡಾ. ಸಿ. ಆರ್. ಚಂದ್ರ ಶೇಖರ್, ಡಾ. ಎಸ್. ರಾಜಾರಾಮ್, ಡಾ. ಬಿ.ಎನ್. ಗಂಗಾಧರ ಮತ್ತಿತರ ವೈದ್ಯರಿದ್ದಾರೆ. ಯಾವ ಹಣದ ನಿರೀಕ್ಷೆ ಇಲ್ಲದೆ ದುಡಿಯುತ್ತಿರುವ 'ಪ್ರಸನ್ನ ಆಪ್ತಸಲಹಾ ಕೇಂದ್ರ' ಪ್ರತಿ ವರ್ಷ, ಹತ್ತು ತಿಂಗಳ ಆಪ್ತಸಲಹಾ ತರಪೇತು ತರಗತಿಗಳನ್ನು ಏರ್ಪಡಿಸುತ್ತಾ ಬಂದಿದೆ.

ಇಲ್ಲಿ ವಿವಿಧ ಹಿನ್ನೆಲೆಯಿಂದ ಬಂದು ತರಪೇತುಗೊಳ್ಳುವ ಜನರಿದ್ದಾರೆ. ತಮ್ಮ ಬದುಕನ್ನು, ತಮ್ಮ ಸ್ನೇಹ–ಸಂಬಂಧಗಳನ್ನು, ತಮ್ಮ ಕುಟುಂಬದ ನೆಮ್ಮದಿಯನ್ನು ಹಿಗ್ಗಿಸಿಕೊಳ್ಳುವ, ಅದರಾಚೆ ತಮ್ಮಿಂದಾದಷ್ಟು ಸುತ್ತಲಿನ ಸಮಾಜಕ್ಕೆ ಸೇವೆ ಮಾಡುವ ಉದ್ದೇಶದಿಂದ ಬರುವ ಜನ. ಈ ಕೇಂದ್ರ 'ಕೌನ್ಸಿಲಿಂಗ್'ನ್ನು ಒಂದು ಹಣ ಗಳಿಸುವ ತರಪೇತಿನಂತೆ ಉಪಯೋಗಿಸಿಕೊಳ್ಳಲು ಉತ್ತೇಜಿಸುವುದಿಲ್ಲ. ಇಲ್ಲಿ ಬಂದ ಪ್ರತಿಯೊಬ್ಬರಿಗೂ ಸೇವಾ ಮನೋಭಾವವನ್ನು, ನಿಸ್ವಾರ್ಥ ಭಾವನೆಯನ್ನು ಒತ್ತಿ ಹೇಳುವ ಈ ಸಂಸ್ಥೆ, ಸ್ವತಃ ಯಾವ ಹಣದ ನಿರೀಕ್ಷೆ ಇಲ್ಲದೆ ಕೆಲಸ ಮಾಡುತ್ತಿದೆ. ಆಪ್ತ ಸಲಹೆಯ ಅಗತ್ಯ ಇದ್ದವರು ಕೆಳಗಿನ ವಿಳಾಸವನ್ನು ಸಂಪರ್ಕಿಸಬಹುದು :

ಪ್ರಸನ್ನ ಆಪ್ತಸಲಹಾ ಕೇಂದ್ರ
91, 'ಧರ್ಮಶ್ರೀ'
ಶಂಕರಮಠ ಸಮಾನಾಂತರ ರಸ್ತೆ
ಶಂಕರಪುರಂ, ಬೆಂಗಳೂರು-560 004

---

ನಾ ಹುಟ್ಟಿದ್ದು ಸಣ್ಣ ಊರಿನಲ್ಲಿ. ಒಡಹುಟ್ಟಿದ ಅಕ್ಕ ತಂಗಿಯರು. ನನಗೆ ಒಂದು ವರ್ಷವಿರಬೇಕು, ಪೋಲಿಯೋಗೆ ಬಲಗಾಲು ಬಲಿಯಾಯಿತು. ಕೋಲು ಊರಬೇಕಿರಲಿಲ್ಲ. ಆದರೆ ಎಳೆದೆಳೆದು ಹಾಕುವ ಕಾಲು. ಬೆಂಗಳೂರಲ್ಲಿ ಹೆಚ್ಚಿನ ವೈದ್ಯಕೀಯ ಸೌಲಭ್ಯಗಳಿವೆ ಎಂದು ಅಪ್ಪ ಇಲ್ಲಿಗೇ ವರ್ಗ ಮಾಡಿಸಿಕೊಂಡರು. ಕ್ಯಾಲಿಪರ್ಸ್ ಹಾಕಿಸಿದರು. ಚೆನ್ನಾಗಿಯೇ ಓದಿಸಿದರು. ಅಮ್ಮ ಅಪ್ಪ, ತಾತಾ ಅಜ್ಜಿ, ಮಾವಂದಿರ ಪ್ರೀತಿಯ ಹೊಳೆಯಲ್ಲಿ ಈಜಿದ ಬಾಲ್ಯ, ಜಾಣೆ ಹುಡುಗಿ ಎಂಬ ಕೋಡು. ಆದರೇಕೋ ತಟ್ಟನೆ ಕಾಲೇಜಿನಲ್ಲಿ ನನ್ನ ಊನ ದೊಡ್ಡದಾಗಿ ಕಂಡಿತು. ಶಾಲೆಯಲ್ಲಿ ಅಷ್ಟು ಕಾಡದ ಕೀಳರಿಮೆ ಕಾಲೇಜು ದಿನಗಳಲ್ಲಿ ನನ್ನ ಮುತ್ತಿಕೊಂಡಿತು. ನೇರ ನಡೆವ ಹುಡುಗಿಯರ ನಡುವೆ ನನ್ನಲ್ಲಿಯ ನ್ಯೂನತೆ ಹಿಗ್ಗಿ ಹಿರಿದಾಗಿ, ನನ್ನ ಆತ್ಮವಿಶ್ವಾಸ ನಡುಗಿತು. ಇದೀಗ ಬಸ್ಸು ಹಿಡಿದು ಹೋಗಬೇಕಿತ್ತು. ಅಷ್ಟೆತ್ತರದ ಮೊದಲ ಮೆಟ್ಟಲು, ನುಗ್ಗಿ ಏರುವ ಜನರ ಜೊತೆ ನಾನೂ ಏಗಿ ಏರಬೇಕು. ಒಂಟಿಕಾಲಿನ ಮೇಲೆ ಭಾರ ಹಾಕಿ ನೇತಾಡಬೇಕು. ದಿನ ದಿನದ ಈ ಸಣ್ಣ ಘಟನೆಗಳು, ತಟ್ಟನೆ ನನ್ನ ಮಿತಿಗೆ ಕನ್ನಡಿ ಹಿಡಿದಂತೆ ಕಂಡವು. ಹೈಸ್ಕೂಲಿನ ಜಾಣೆ ಹುಡುಗಿ, ಲಿಟರರಿ ಛಾಂಪಿಯನ್, ಕಾಲೇಜಲ್ಲಿ ಮಂಕಾದಳು, ಏಕಾಂಗಿಯಾದಳು.

ಆದರೆ ಡಿಗ್ರಿ ಆದೊಡನೆ ಬ್ಯಾಂಕಿನ ನೌಕರಿ ತಟ್ಟನೆ ಸಿಕ್ಕಿತು. ನನ್ನ ಕಾಲ ಮೇಲೆ ನಾ ಅಭಿಮಾನದಿಂದ ನಿಂತೆ. ನನ್ನ ಕೀಳರಿಮೆ ಮಾಯವಾಯಿತು. ಕೆಲಸಕ್ಕೆ ಸೇರಿ ಎರಡು ವರ್ಷ, ನನ್ನ ವಿವಾಹವಾಯಿತು. ಅಪ್ಪ ಅಮ್ಮ ನೋಡಿ ಮಾಡಿದ ಮದುವೆ. 32 ಗುಣಗಳೂ ಸೇರಿ, ಜಾತಕ ಅದ್ಭುತವಾಗಿ ಕೂಡಿ ಬಂದಿತ್ತು. ಹುಡುಗ ತನ್ನ ಕುಟುಂಬದೊಡನೆ ಬಂದು ನೋಡಿ ನನ್ನ ಪೋಲಿಯೋ ಕಾಲಿನ ವಿವರಗಳು ತಿಳಿದಿದ್ದರೂ ಮದುವೆಗೆ ಒಪ್ಪಿದ. ಆದರೆ ಯಾರ ಒತ್ತಾಯವಿಲ್ಲದೆ, ಸ್ವತಃ ಬಂದು ಒಪ್ಪಿದ ಗಂಡು ಮದುವೆಯಾದೊಡನೆ ನನ್ನ 'ಕಾಲ'ನ್ನು ದೊಡ್ಡ ವಿಷಯವಾಗಿ ಮಾಡಿ ಕುಳಿತ. ನಾ ಒಳ್ಳೆ ನೌಕರಿಯಲ್ಲಿದ್ದು ಕೈ ತುಂಬಾ ಸಂಬಳ ತರುವ ಉದ್ಯೋಗಸ್ಥ ಹುಡುಗಿ. ಕಾಲಿನ ಸಣ್ಣ ಅಡಚಣೆ ನನ್ನ ಕಛೇರಿ ಮತ್ತು ಮನೆಯ ಯಾವ ಕೆಲಸಕ್ಕೂ ತೊಂದರೆ ಆಗಿರಲಿಲ್ಲ. ಅವರ ಸ್ನೇಹಿತನೊಬ್ಬ ಎರಡೂ ಕಾಲಿಲ್ಲದ ಹುಡುಗಿಯನ್ನು ವಿವಾಹವಾಗಿದ್ದ. ನಮ್ಮವರಿಗೂ ಆದರ್ಶಗಳನ್ನು ಉಪದೇಶಿಸಿದ್ದ. ಆದರೆ ಆ ಆದರ್ಶಗಳಂತೆ ಜೀವಿಸಲು ಬೇಕಾದ ದೊಡ್ಡ ವ್ಯಕ್ತಿತ್ವ ಇವರದಾಗಿರಲಿಲ್ಲ. ತೀರಾ ದುರ್ಬಲ ಮನಸ್ಸಿನಾತ. ತಮ್ಮದಾದ ನಿರ್ಧಾರಗಳು, ತಮ್ಮದಾದ ವ್ಯಕ್ತಿತ್ವ ಇಲ್ಲದ ವ್ಯಕ್ತಿ. 'ನೀ ಕೆಲಸ ಮಾಡ್ತಾ ಇದ್ದೀಯ ಅಂತಲೇ ವಿವಾಹವಾದದ್ದು' ಎಂದು ಕೂಡಾ ಒಮ್ಮೆ ಹೇಳಿದ ಆಸಾಮಿ ! ನನಗೇ ತೊಂದರೆಯಾಗಿಲ್ಲದ ನನ್ನ ದೈಹಿಕ ನ್ಯೂನತೆ, ಅತ್ತೆ ಮನೆಯಲ್ಲಿ ಅಡಿಗಡಿಗೆ ಎತ್ತಿ ತೋರಿಸುವ ಆಡಿ ತಿವಿಯುವ ವಸ್ತುವಾಯಿತು. ಮದುವೆ ನನ್ನೊಳಗಿನ ಚೈತನ್ಯದ ಬುಗ್ಗೆಯನ್ನು, ಉತ್ಸಾಹದ ಎಳೆಯ ಹುಡುಗಿಯನ್ನು ಮುದುಡಿಟ್ಟಿತು.

ಮದುವೆಯಾದ ಹೊಸದರಲ್ಲಿಯೇ ಗಂಡನ ಸಣ್ಣ ಸಣ್ಣ ತಿವಿತಗಳು ಆರಂಭವಾದವು. 'ನಿನಗೆ ಕಾಲು ಸರಿಯಿಲ್ಲ. ನಿನ್ನ ಜೊತೆ ಹೊರಗೆ ಹೋಗಲು ನನಗೆ ನಾಚಿಕೆ ಆಗುತ್ತೆ. ಸಮಾರಂಭಗಳಿಗೆ ಕರೆದುಕೊಂಡು ಹೋಗಿ ನನ್ನ ಹೆಂಡ್ತಿ ಅನ್ನೋಕೆ ಮುಜುಗರವಾಗುತ್ತೆ' ಎಂದು ಶುರು ಮಾಡಿದರು. 'ನಿನ್ನ ಕೈಲಿ ಏನೂ

ಆಗೋಲ್ಲ, ಕಾಲು ಸರಿ ಇಲ್ಲದಿದ್ದರೂ ಮದುವೆ ಆಗಿದ್ದೀನಿ'. ದಿನದ ಇಪ್ಪತ್ತ ನಾಲ್ಕು ಗಂಟೆ ಜಪ ಮಾಡಿದರು. ನನ್ನ ಕೈಲಿ ಏನು ಆಗೋಲ್ಲ ನನಗೆ ತಿಳಿಯುತ್ತಿರಲಿಲ್ಲ. ಮನೆಯ ಎಲ್ಲಾ ಕೆಲಸ ಮಾಡುತ್ತಿದ್ದೆ, ಅಟ್ಟದ ಮೇಲೆ ಏರುವುದನ್ನು ಬಿಟ್ಟು. ಆದರೆ ಅವರ ಬಾಯಲ್ಲಿ ಪದೇ ಪದೇ ಇಂಥಾ ಮಾತುಗಳನ್ನು ಕೇಳಿ, ನನಗೇ ನನ್ನ ಸಾಮರ್ಥ್ಯದ ಬಗ್ಗೆ ನಂಬಿಕೆ ಹೋಗುತ್ತಾ ಬಂತು. ಬಹುಶಃ ಈತನಿಗೇ ಎಲ್ಲಿಲ್ಲದ ಕೀಳರಿಮೆ ಇತ್ತೇನೋ ಎಂದು ಈಗ ನನಗೆ ಅನಿಸುತ್ತಿದೆ. ಅವರ ಅಕ್ಕ, ಅಣ್ಣ, ತಮ್ಮಂದಿರು ಚೆನ್ನಾಗಿ ಓದಿ ದೊಡ್ಡ ಕೆಲಸದಲ್ಲಿದ್ದು, ಮನೆ–ಕಾರು ಮಾಡಿಕೊಂಡು ಗತ್ತಿನಿಂದಿರುವ ಮಂದಿ· ಈತನದು ಸದಾ 'ನನಗೇನೂ ಇಲ್ಲ. ನನ್ನ ಹೆಂಡತಿ ಕಾಲು ಚೆನ್ನಾಗಿಲ್ಲ' ಎಂದು ಇರುವುದೆಲ್ಲವ ಬಿಟ್ಟು ಇಲ್ಲದಕ್ಕೆ ಹಾತೊರೆದು ಕೊರಗುವ ಬುದ್ಧಿ. ಗಂಡನ ಮೇಲೆ ಅತ್ತೆಯ ವಿಪರೀತದ ಹತೋಟಿ ಇತ್ತು. ಅತ್ತೆ ಎರಡನೇ ಹೆಂಡತಿ. ವಯಸ್ಸಿನಲ್ಲಿ ಚಿಕ್ಕೋರು. ತಮ್ಮ ಅತೃಪ್ತ ಬದುಕಿನ ಕಹಿಯನ್ನೆಲ್ಲ ನಮ್ಮ ಬದುಕಿನಲ್ಲಿ ಕಾಡಿದಂತೆ ಕಾಣುತ್ತಿತ್ತು. ಮಗ ಏನು ಮಾಡಿದರೂ ತನ್ನನ್ನು ಕೇಳಿ ಮಾಡಬೇಕು. ಎಲ್ಲವೂ ತನ್ನ ಹತೋಟಿಯಲ್ಲಿರಬೇಕು ಎಂಬ ಹಟ. ಸಿನಿಮಾಗೆ ಹೋದರೆ ಅಮ್ಮನಿಗೆ ಹೇಳಬೇಕು, ಪಾನಿಪುರಿ ತಿನ್ನಬೇಕೆಂದರೆ ಅಮ್ಮನನ್ನು ಕೇಳಬೇಕು ! ಸದಾ ಏನು ಮಾಡಿದರೆ ತಪ್ಪೋ, ಏನು ಮಾಡಿದರೆ ಸರಿಯೋ ತಿಳಿಯದ ಆತಂಕದ ಕ್ಷಣಗಳು. 'ನಿನ್ನ ಕೈಯಲ್ಲಿ ಆಗೋಲ್ಲ, ನಿನ್ನ ಕಾಲು ಸರಿಯಿಲ್ಲ. ನಾವು ನಿನ್ನ ಉದ್ಧಾರ ಮಾಡಿದೆವು' ಎಂಬ ಮಾತುಗಳು. ನನಗೆ ಹೇಳಿಕೊಳ್ಳಲು ಯಾರೂ ಇರಲಿಲ್ಲ. ನನ್ನ ಪರಿಸ್ಥಿತಿ ಅರ್ಥವಾಗುವಂತೆಯೇ ಇರಲಿಲ್ಲ. ದೈಹಿಕ ಹಿಂಸೆಯಾದರೆ ತಟ್ಟನೆ ಕಾಣುತ್ತದೆ, ಅರ್ಥವಾಗುತ್ತದೆ. ಈ ದಿನ ದಿನದ ಸಣ್ಣ ಸಣ್ಣ ಒಳ ಚುಚ್ಚುವ ಮುಳ್ಳುಗಳನ್ನು ವಿವರಿಸುವುದು ಕಷ್ಟ, ಅನುಭವಿಸುವುದೂ ಕಷ್ಟ. ಎಲ್ಲರಿಂದ ಕೇಳಿಬಂದ ಒಂದೇ ಉಪದೇಶ 'ಹೊಂದಿಕೋ, ಒಂದು ಮಗುವಾದರೆ ಸರಿ ಹೋಗುತ್ತೆ'. ಮಗುವೂ ಆಗಮಿಸಿತು, ಯಾವ ಪವಾಡವೂ ನಡೆಯಲಿಲ್ಲ. ಹೊಸ ಸಮಸ್ಯೆಗಳು ಹುಟ್ಟಿಕೊಂಡವು. 'ಅಲ್ಲಿ ಲೋಟ ಏಕೆ ಇಟ್ಟಿದ್ದೀಯಾ, ಇಲ್ಲಿ ಮಗು ಉಚ್ಚೆ ಮಾಡಿತ್ತು, ಸರಿಯಾಗಿ ಎರಡೆರಡು ಬಾರಿ ಒರಸು. ಬಟ್ಟೆ ಈಗ ಏಕೆ ನೆನೆಸಿದೆ ?' ಮುಂದುವರೆದ ದಿನದಿನದ ಪಿರಿಪಿರಿ. ಇದ್ದಕ್ಕಿದ್ದಂತೆ ಒಮ್ಮೆ ಇವರು, 'ಒಂದೂವರೆ ಲಕ್ಷ ತಗೊಂಬಾ, ನಿನಗೆಂದೇ ಬೇರೆ ಮನೆ ಮಾಡ್ತೀನಿ. ಅಪ್ಪನ ಮನೆಯಿಂದ ತಂಗೊಂಡು ಬಾ' ಎಂದು ಶುರು ಮಾಡಿದರು. ಪಿಂಚಣಿ ಪಡೆಯುತ್ತಿರುವ ಅಪ್ಪ, ಓದು ಮುಗಿದಿಲ್ಲದ, ಮದುವೆಯಾಗಿಲ್ಲದ ತಂಗಿಯರು. ಯಾವ ಮುಖದಲ್ಲಿ ಇಷ್ಟು ಓದಿಸಿ, ನನ್ನ ಕಾಲ ಮೇಲೆ ನಿಲ್ಲಿಸಿದ ಅಪ್ಪನನ್ನು ಲಕ್ಷ ಕೇಳುವುದು ? ನಾ ಜಗ್ಗದಾಗ ನನ್ನ ಮೇಲೆ ಕೈ ಎತ್ತಿದರು. 'ನಾ ಪೋಲೀಸ್ ಸ್ಟೇಷನ್‌ಗೆ ಹೋಗ್ತೀನೆ' ಎಂದು ಬೆದರಿಸಿದೆ. 'ನನ್ನ ಹೆಂಡತಿ ನನ್ನ ಮಾತು ಕೇಳೋಲ್ಲ' ಎಂದು ತಲೆ ತಲೆ ಚಚ್ಚಿಕೊಳ್ಳುವುದು, ಕೂಗಾಡುವುದು ಎಲ್ಲಾ ನನಗೆ ತೀರಾ ವಿಚಿತ್ರವಾಗಿ ಕಾಣುತ್ತಿತ್ತು. ಒಮ್ಮೆಯಂತೂ ಸಣ್ಣ ವಿಷಯಕ್ಕೆ ಜಗಳ ತೆಗೆದು ಇವರು ಚಾಕು ಹಾಕಿಕೊಳ್ಳಲು ಹೊರಟುಬಿಟ್ಟರು. ಕೇಳಿ ಕೇಳಿ ಸಾಕಾಗಿ ಒಮ್ಮೆ 'ಏನಾದರೂ ಮಾಡಿಕೊಳ್ಳಿ' ಎಂದು ನಾನು ಅಂದದ್ದೇ ತಡ, ಅಡಿಗೆ ಮನೆಯಿಂದ ಚಾಕು ತಂದು, ಹೊಟ್ಟೆಯ ಬಳಿ ಇಟ್ಟುಕೊಂಡು 'ಹಾಕಿಕೊಳ್ತೀನೆ ನೋಡು, ಹಾಕಿಕೊಳ್ತೀನೆ' ಎಂದು ಹೇಳುತ್ತಾ ನಿಂತರು. ನಾ ದಿಗ್ಭ್ರಾಂತಳಾಗಿ ನಿಂತು ಬಿಟ್ಟೆ. ನಾದಿನಿ ಬಂದು ಚಾಕು ಕಿತ್ತುಕೊಂಡಳು. ನನ್ನ ಕೈ ಕಾಲು ನಡುಗುತ್ತಿತ್ತು. ಅವರು ತಲೆ ತಲೆ ಚಚ್ಚಿಕೊಂಡು ಅಳತೊಡಗಿದರು. 'ಅಯ್ಯೋ, ಇವಳೂ ನನ್ನ ಮಾತು ಕೇಳೋಲ್ಲ' ಎಂದು ಹಣೆ ಹಣೆ ಬಡಿದುಕೊಂಡರು. ಆದರೆ, ಅಷ್ಟೆಲ್ಲ ರಂಪ ಆದ ಮೇಲೂ ಅವರು ಆರಾಮಾಗಿ ಮಲಗಿದರು. ನನಗೆ ಇಡೀ ರಾತ್ರಿ ನಿದ್ದೆ ಇರಲಿಲ್ಲ. ನನಗನಿಸಿತು ಈತ ಏನೋ ಕೋಪದಲ್ಲಿ, ಕ್ಷಣದ ಆಸ್ಫೋಟದಲ್ಲಿ, ಇಲ್ಲ ತಮ್ಮ ದೌರ್ಬಲ್ಯದ ಒಂದು ಗಳಿಗೆಯಲ್ಲಿ, ಒಂದು ಪಕ್ಷ ಚಾಕು ಹಾಕಿಕೊಂಡೇ ಬಿಟ್ಟರೆ, ನಾ ಜೈಲಿಗೆ ಹೋಗಬೇಕಾಗಬಹುದು. ನನ್ನ ಎಳೆಯ ಕೂಸಿನ ಗತಿ ಏನು ಎನಿಸಿತು. ನಾ ಮರುದಿನ ಮಗುವನ್ನೂ ಕರೆದುಕೊಂಡು ಸೀದಾ ಅಮ್ಮನ ಮನೆಗೆ ಬಂದಿಳಿದೆ.

ಅವರು ಕರೆದೊಯ್ಯಲು ಬಂದರು. 'ಇನ್ನೊಂದು ಸಲ ಈ ರೀತಿ ವಿಪರೀತಕ್ಕೆ ಹೋಗೋಲ್ಲ ಅಂತ ಭರವಸೆ ಕೊಡಿ ಬರ್ತೇನೆ' ಎಂದೆ. ಅದಕ್ಕೆ ಅವರು ತಯಾರಿರ

ಲಿಲ್ಲ. ಅವರುಗಳೆಲ್ಲ, ಅತ್ತೆ, ಅತ್ತಿಗೆ ಎಲ್ಲಾ ದಂಡು ಕಟ್ಟಿಕೊಂಡು ಬಂದು ಗಂಟೆಗಟ್ಟಲೆ ಏಕವಚನದಲ್ಲಿ ಬೈಯ್ದರು. 'ದರಿದ್ರರ ಸಂಗ, ಅಲ್ಪರ ಸಂಗ, ನಿನಗೆ, ನಿನಗೆ ಯಾರೂ ಬಾ ಅಂತಾ ಕರೀತಿಲ್ಲ,' ಎಂದು ಶುರು ಮಾಡಿದವರು ಕೈಯೆತ್ತುವವರೆಗೂ ಬಂದರು.

ಇಂದು ಅಮ್ಮನ ಮನೆಗೆ ಬಂದು ಹಲವಾರು ವರ್ಷಗಳಾಗಿವೆ. ಎಷ್ಟೋ ಬಾರಿ ಮತ್ತೆ ಹೋದೆ, ಅವರು ಸ್ಟ್ರಾಂಗ್ ಆಗಬಹುದು ಎಂಬ ಆಸೆಯಲ್ಲಿ. ತನ್ನ ಹೆಂಡತಿ ತಾನು ಹೇಳಿದ ಮಾತು ಕೇಳಲಿಲ್ಲ ಎನ್ನುವುದು ಸಾಕಿತ್ತು ಅವರ ಉನ್ಮಾದಕ್ಕೆ. ಇಂಥಾ ಮಾನಸಿಕ ಭೀತಿಯ ವಾತಾವರಣದಲ್ಲಿ ನನಗೆ ನನ್ನ ಮಗು ಬೆಳೆಯುವುದು ಬೇಕಿರಲಿಲ್ಲ. ಮಗುವನ್ನು ನೋಡಲು ಕೂಡಾ ಆತ ಬರಲಿಲ್ಲ.

ಗಂಡನ ಮನೆ ಬಿಟ್ಟುಬಂದು ಪೂರ್ಣ ಛಿದ್ರವಾಗಿದ್ದೆ. ಏನು ಮಾಡಲೂ ತೋರುತ್ತಿರಲಿಲ್ಲ. ತಟ್ಟನೆ ನೆನಪಿನ ಶಕ್ತಿ ಕಳೆದಂಥಾ ಅನುಭವ. ಬೆನ್ನು ನೋವು, ಕಾಲು ನೋವು, ಎಂದೂ ಇಲ್ಲದ ಏನೇನೋ ರೋಗಗಳು ಆವರಿಸಿದವು. ಇಂಥಾ ಸಂದರ್ಭದಲ್ಲಿ ನನಗೆ 'ಮಾರ್ಗದರ್ಶಿ'ಯ ಪರಿಚಯವಾಯಿತು.

'ಮಾರ್ಗದರ್ಶಿ' ಅಂಗವಿಕಲರ ಸಂಘ. ಇದಕ್ಕೆ ಒಂದು ಕಛೇರಿ ಇಲ್ಲ. ಪ್ರತಿ ತಿಂಗಳೂ ಮೊದಲ ಭಾನುವಾರ ಕಬ್ಬನ್ ಪಾರ್ಕಿನಲ್ಲಿ ಸದಸ್ಯರ ಭೆಟ್ಟಿ. ಎಂಟು ವರ್ಷದಿಂದ ಅಸ್ತಿತ್ವದಲ್ಲಿರುವ ಸಂಘ. ಅಲ್ಲಿ ಶಾಂತಾ ಅನ್ನುವವರಿದ್ದಾರೆ. ಆಕೆಯ ಪರಿಚಯವಾಯಿತು. ಈ ಸಂಘ ಕ್ಯಾಲಿಪರ್ಸ್ ಕೊಡಿಸೋದು, ಗಾಲಿ ಕುರ್ಚಿ ಕೊಡಿಸೋದು, ಅಂಥಾ ಕೆಲಸ ಮಾಡಿದರೂ ಮುಖ್ಯ ಅಂಗವಿಕಲರಿಗೆ ಮಾನಸಿಕ ಶಕ್ತಿ, ಆತ್ಮವಿಶ್ವಾಸ ತುಂಬುವುದಾಗಿದೆ. 'ನಮ್ಮಿಂದ ಬಹಳಷ್ಟು ಸಾಧ್ಯ, ಕೆಲವು ಮಿತಿಗಳಿವೆ ಆದರೆ ನಮ್ಮಲ್ಲಿ ಸಾಮರ್ಥ್ಯವೂ ಬಹಳಷ್ಟಿದೆ' ಎಂಬ ಭರವಸೆ ಮೂಡಿಸೋದು. ಎಷ್ಟೋ ಜನ ಅಂಗವಿಕಲರು ಓದಿದ್ದರೂ ಸಾಮರ್ಥ್ಯ ಇದ್ದರೂ ಆತ್ಮವಿಶ್ವಾಸ ಇಲ್ಲದೆ ಜಗತ್ತನ್ನು ಎದುರಿಸಲು ಹಿಂಜರಿದು ಮನೆಯಲ್ಲಿ ಅವಿತು ಕೂರುತ್ತಾರೆ. ನಾನೂ ಕೂಡಾ, ಕೆಲಸಕ್ಕೆ ಹೋದರೂ ಈ ಮದುವೆಯ ನಂತರ ನನ್ನ ಮೇಲಿನ ವಿಶ್ವಾಸ ಕಳೆದುಕೊಂಡು ಚಿಪ್ಪಿನಲ್ಲಡಗಿಕೊಂಡಿದ್ದೆ. ಎಲ್ಲಿ ಹೋಗಲೂ ಮನಸ್ಸಿಲ್ಲ, 'ನನ್ನಿಂದೇನೂ ಸಾಧ್ಯವಿಲ್ಲ' ಎಂದು ನನ್ನದೇ ಕೋಟೆ ಕಟ್ಟಿಕೊಂಡು ಕುಳಿತುಬಿಟ್ಟಿದ್ದೆ. 'ಮಾರ್ಗದರ್ಶಿ' ನನಗೆ ನಿಜಕ್ಕೂ ಮಾರ್ಗದರ್ಶನ ಮಾಡಿತು. ಶಾಂತಾ ನನ್ನನ್ನು ಮಾರ್ಗದರ್ಶಿಗೆ ಕರೆದೊಯ್ದರು. ಅಲ್ಲಿ ಇದ್ದ ಅಂಗವಿಕಲರ ದೈಹಿಕ ಕಷ್ಟಗಳನ್ನು ಕಂಡಾಗ, ನನ್ನದು ಏನೂ ಅಲ್ಲ ಅನಿಸಿತು.

ಕಬ್ಬನ್ ಪಾರ್ಕ್‌ನಲ್ಲಿ ತಿಂಗಳ ಮೀಟಿಂಗ್, ವಾರಾಂತ್ಯಗಳಲ್ಲಿ ಯಾರ ಮನೆಯಲ್ಲಾದರೂ ಒಂದುಗೂಡೋದು, ಸಂಗೀತ ಅಭ್ಯಾಸ ಮಾಡೋದು, ಅಂಗವಿಕಲತೆಯ ಸಮಸ್ಯೆ ಹೊತ್ತು ಬಂದವರಿಗೆ ಆಪರೇಷನ್ ಮಾಡಿಸುವುದು, 'ಫಾಲೋ ಅಪ್' ಮಾಡುವುದು, ಈ ಎಲ್ಲ ಗುಂಪಿನ ಕಾರ್ಯಗಳಲ್ಲಿ ನಾನೂ ಒಂದಾದೆ. ಪ್ರತಿ ವರ್ಷ ನಮ್ಮ 'ಮಾರ್ಗದರ್ಶಿ'ಯಿಂದ ಎಲ್ಲಿಗಾದರೂ ಟ್ರಿಪ್ ಹಾಕಿ ನಾವು ನಾವೇ ಟೂರು ಹೊಡೆದುಬಂದೆವು. ಗಾಲಿ ಕುರ್ಚಿಯಲ್ಲಿರುವ ಅಂಗವಿಕಲರು ಎಷ್ಟೋ ಜನ ಇದ್ದೇವೆ. ನಮ್ಮ ಗಾಲಿ ಕುರ್ಚಿಯನ್ನೂ ತೆಗೆದುಕೊಂಡು, ಪ್ರಪಂಚ ಪರ್ಯಟನೆ ನಮ್ಮದು. ಮಕ್ಕಳನ್ನೂ ಕರೆದೊಯ್ದೆವು. ನಮ್ಮಿಂದ ಇದು ಸಾಧ್ಯವಿಲ್ಲ, ಅದು ಸಾಧ್ಯವಿಲ್ಲ ಎಂಬ ಅಪನಂಬಿಕೆಗಳೆಲ್ಲ ಕರಗಿ ಆತ್ಮವಿಶ್ವಾಸ ಮೂಡಿದ ಟೂರುಗಳು ಇವು. ಒಂದು ಟಾಯ್ಲೆಟ್‌ಗೆ ಹೋಗಬೇಕೆಂದರೆ, ಪ್ಲಾಸ್ಟಿಕ್ ಹಾಳೆ ಹರಡಿಕೊಂಡು ಒದ್ದೆಯಾಗದಂತೆ ಕೈಗಳಲ್ಲೇ ತೆವಳಿಕೊಂಡು ಹೋಗಬೇಕಾದವರಿದ್ದಾರೆ. ಎರಡು ಕಾಲಿಲ್ಲದ ಗಾಲಿ ಕುರ್ಚಿಗೆ ಅಂಟಿಕೊಂಡವರೂ ನಮ್ಮ ಜೊತೆ ಇದ್ದರು. ಪರಸ್ಪರರಿಗೆ ಬೆಂಬಲವಾಗಿ ನಮ್ಮ ಮಿತಿಗಳನ್ನೆಲ್ಲ ಮರೆತು, ನಮ್ಮ ಸಾಮರ್ಥ್ಯವನ್ನಷ್ಟೇ ನೆನೆದು ನಡೆಯುತ್ತೇವೆ.

ಮೆಲ್ಲನೆ ಕಳೆದುಕೊಂಡ ಆತ್ಮವಿಶ್ವಾಸ ಹಿಂತಿರುಗಿತು. ಇದೇ ಸಮಯದಲ್ಲಿ ನಾನು ಓರ್ವ 'ಆಪ್ತಸಲಹಾ ಕೇಂದ್ರ'ಕ್ಕೂ ಭೆಟ್ಟಿ ಕೊಟ್ಟೆ. 'ನಿನಗೆ ಬಂದ ಕಷ್ಟ ಭಯಂಕರ ಕಷ್ಟವಲ್ಲ. ಆದರೆ ನಿನಗೆ ಏನು ಬೇಕು ಅಂತಾ ಮೊದಲು ನಿರ್ಧರಿಸಮ್ಮ' ಎಂದರು. 'ನಿನಗೆ ಮತ್ತೆ ಗಂಡನ ಮನೆಗೆ ಹೋಗಿ ಅದೇ ಬದುಕು ನಡೆಸಬಲ್ಲೆ ಎಂಬ ಧೈರ್ಯ ಇದೆಯೆ?' ಕೇಳಿದರು. 'ಇಲ್ಲ....' ಎಂದೆ. 'ವಿಚ್ಛೇದನ ತಗೊಳ್ತೀಯಾ?' ಎಂದರೆ ಅದಕ್ಕೂ 'ಇಲ್ಲ....' ಅಂದೆ. 'ಮತ್ತೇನು ಮಾಡ್ತೀಯಾ?' ಕೇಳಿದರೆ ನನಗೆ ಗೊತ್ತಿರಲಿಲ್ಲ. ನನ್ನ ಗಂಡನಿಗೆ ಹೆಂಡತಿ

(5ನೇ ಪುಟ ನೋಡಿ)

# ವಿಶ್ವ ಸುಂದರಿ (?) ಸ್ಪರ್ಧೆ !

★ ಕೆ. ಎಸ್. ವಿಮಲ

ಭಾರತದಲ್ಲಿ ಪ್ರಥಮ ಬಾರಿಗೆ ಬೆಂಗಳೂರು ನಗರದಲ್ಲಿ ವಿಶ್ವಸುಂದರಿ ಸ್ಪರ್ಧೆ ನಡೆಯಲಿದೆ ಎಂಬ ಹೆಗ್ಗಳಿಕೆಯ ಮಾತು ಕೇಳಿಬರುತ್ತಿದೆ. ಮೇಲ್ನೋಟಕ್ಕೆ ತುಂಬ ಆಪ್ಯಾಯಮಾನ ಎನಿಸುವ ಈ ಸ್ಪರ್ಧೆಯ ಹಿಂದಿನ ಉದ್ದೇಶ ಮೇಲೆ ಕಾಣಿಸುವಷ್ಟು ಸರಳವಾದದ್ದಲ್ಲ. ಜಾಗತಿಕ ಮಟ್ಟದಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಸ್ವಲ್ಪ ಗಂಭೀರವಾಗಿ ಪರಿಶೀಲಿಸಿದರೆ ಇದರ ಒಳ–ಹೊರಗು ನಿಚ್ಚಳವಾಗಿ ಕಾಣುತ್ತದೆ.

ಒಂದು ಹಂತದಲ್ಲಿ ಮುಂದುವರೆದ ರಾಷ್ಟ್ರಗಳು ತರುಣಿಯರಿಗೆ ಮಾತ್ರ ಸೀಮಿತವಾಗಿದ್ದ ಸುಂದರಿ ಪಟ್ಟ ಇದ್ದಕ್ಕಿದ್ದಂತೆ ಅಭಿವೃದ್ಧಿಶೀಲ ರಾಷ್ಟ್ರಗಳತ್ತ ಹರಿದು ಬರುತ್ತಿರುವ ಹಿನ್ನೆಲೆ ಏನು ?

ಈ ಶತಮಾನದ ಪ್ರಾರಂಭದಲ್ಲಿ ಬಂಡವಾಳಶಾಹೀ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸೌಂದರ್ಯ ಸ್ಪರ್ಧೆ ಜಾಹಿರಾತುಗಳ ಮಾರಾಟಕ್ಕೆ ಒಂದು ಸಾಧನವಾಗಿ ಪ್ರಾರಂಭಿಸಲ್ಪಟ್ಟಿತು. ವಸ್ತುಗಳ ವಿಕ್ರಯಕ್ಕೆ ಸಾಧನವಾದ ಮಹಿಳೆಯರು ಕ್ರಮೇಣ ಸ್ವತಃ ವಸ್ತುಗಳಾಗಿ ಮಾರ್ಪಡುತ್ತಿದ್ದಾರೆ. ದೊಡ್ಡ ಉದ್ದಿಮೆದಾರರು ಸೌಂದರ್ಯ ಸ್ಪರ್ಧೆಯನ್ನು ತಮ್ಮ ಬಂಡವಾಳವಾಗಿ ಮಾಡಿಕೊಳ್ಳುತ್ತಿದ್ದಾರೆ. ಈಜುಡುಗೆಗಳನ್ನು ಮಾರಾಟ ಮಾಡಲು ಬೀಚ್ ಸುಂದರಿಯರ ಸ್ಪರ್ಧೆ – ಆಯ್ಕೆ ಪ್ರಾರಂಭವಾಯಿತು. ಈಗ ಆಯ್ಕೆಯಾದ ಸುಂದರಿಯರ ಮೂಲಕ ತಮ್ಮ ವಸ್ತುಗಳ ಮಾರಾಟಕ್ಕೆ ಮಾರುಕಟ್ಟೆ ವಿಸ್ತರಿಸುವ ಪರಿಪಾಠ ಪ್ರಾರಂಭವಾಗಿದೆ. ಸೌಂದರ್ಯ ಸ್ಪರ್ಧೆಗಳನ್ನು ಪ್ರಾಯೋಜಿಸುತ್ತಿರುವವರು ಯಾರು ಎಂಬುದನ್ನು ನೋಡಿದರೆ ಇದು ನಿಚ್ಚಳವಾಗುತ್ತದೆ.

ಹದಿ ಹರೆಯದ ಸುಂದರಿಯರ ಅಂಗಾಂಗ ಪ್ರದರ್ಶನಗಳ ಮೂಲಕ ಕೋಟಿಗಟ್ಟಲೆ ಡಾಲರ್‌ಗಳ ವ್ಯಾಪಾರ ಹೆಚ್ಚಿಸಿಕೊಳ್ಳುತ್ತಿರುವ ಉದ್ದಿಮೆಗಳು ಇಂತಹ ಸ್ಪರ್ಧೆಗಳನ್ನು ಪ್ರಾಯೋಜಿಸಲು ಮುಂದೆ ಬರುತ್ತಿವೆ.

ಬಲಾಢ್ಯ ದೇಶಗಳು ತಮ್ಮ ದೇಶದ ಆರ್ಥಿಕ ಸಮತೋಲನವನ್ನು ಕಾಪಾಡಿಕೊಳ್ಳಲು ಅಭಿವೃದ್ಧಿಶೀಲ ರಾಷ್ಟ್ರಗಳ ಮಾರುಕಟ್ಟೆಗಳನ್ನು ಆಕ್ರಮಿಸಿಕೊಳ್ಳಲು ಹವಣಿಸುತ್ತಿವೆ. ಇಂತಹ ಸ್ಪರ್ಧೆಗಳನ್ನು ತಮ್ಮ ಕಂಪನಿಗಳು ತಳವೂರಲು ಬಯಸುವ ದೇಶಗಳಲ್ಲಿ ಮತ್ತು ಅಂತಹ ಅವಕಾಶ ನೀಡಲು ಸಿದ್ಧವೆಂದು ಹೇಳುವ ದೇಶಗಳಲ್ಲಿ ಈ ಸ್ಪರ್ಧೆ ನಡೆಯುತ್ತಿರುವುದು ಮತ್ತು ಆ ದೇಶದ ಯುವತಿಯರು ಸುಂದರಿಯರಾಗಿ ಆಯ್ಕೆಯಾಗುತ್ತಿರುವುದು ಚಾರಿತ್ರಿಕ ಸತ್ಯ. ಇದನ್ನು ಧೃಡೀಕರಿಸುವ ಕೆಲವು ಉದಾಹರಣೆಗಳು—

1966ರಲ್ಲಿ ಇಂದಿರಾ ಗಾಂಧಿಯವರು ರೂಪಾಯಿಯನ್ನು ಶೇಕಡಾ 33 ಅಪಮೌಲ್ಯ ಮಾಡಿದರು. ಆ ವರ್ಷದ ವಿಶ್ವಸುಂದರಿ ರೀಟಾ ಫಾರಿಯಾ ಭಾರತದ ತರುಣಿ. ನಂತರ 27 ವರ್ಷ ಕಾಲ ಭಾರತದಲ್ಲಿ ಸುಂದರಿಯರೇ ಜನಿಸಲಿಲ್ಲ. ಕಾರಣ ಇಂದಿರಾ ಗಾಂಧಿಯವರು ಸಾರ್ವಜನಿಕ ಉದ್ದಿಮೆಗಳು, ಬ್ಯಾಂಕ್ ರಾಷ್ಟ್ರೀಕರಣ ಮುಂತಾದ ಖಾಸಗೀ ಬಂಡವಾಳ ವಿರೋಧೀ ಕ್ರಿಯೆಗಳಿಗೆ ಒಲವು ತೋರಿಸಿದರು. ನಂತರ.... 1994ರಲ್ಲಿ ಗ್ಯಾಟ್ ಒಪ್ಪಂದಕ್ಕೆ ಬೇಷರತ್ತಾಗಿ ಕೇಂದ್ರ ಸರ್ಕಾರ ಅಂಕಿತ ಹಾಕಿದ ಫಲವಾಗಿ ಒಂದೇ ವರ್ಷದಲ್ಲಿ "ಮಿಸ್ ಯುನಿವರ್ಸ್" ಮತ್ತು "ಮಿಸ್ ವರ್ಲ್ಡ್".... ಎರಡೂ ಸುಂದರಿಯರ ಪಟ್ಟ ಭಾರತದ ತೆಕ್ಕೆಗೆ. ಉದಾರೀಕರಣ ರಾಯರ ವರದಾನ ದೇಶಕ್ಕೆ ಏನ್ನೋಣವೇ ? ಇದು ಕೇವಲ ಭಾರತಕ್ಕೆ ಮಾತ್ರ ಸಂಬಂಧಿಸಿದ ವಿಷಯವಲ್ಲ. ನೆಲ್ಸನ್ ಮಂಡೇಲರವರು ದಕ್ಷಿಣ ಆಫ್ರಿಕಾವನ್ನು ಬಹು ರಾಷ್ಟ್ರೀಯ ಕಂಪನಿಗಳಿಗೆ ತೆರೆದಿಡುತ್ತಾರೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದೊಡನೆ ಆ ದೇಶದ ತರುಣಿ ವಿಶ್ವಸುಂದರಿ ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ ಗಳಿಸಿದ್ದು, ದೇವೇಗೌಡರು ನರಸಿಂಹ ರಾಯರ ಆರ್ಥಿಕ ನೀತಿಯನ್ನೇ ಮುಂದುವರೆಸುವರು ಎಂದ ತಕ್ಷಣ 'ಮಿಸ್ ವರ್ಲ್ಡ್' ಸ್ಪರ್ಧೆ ಭಾರತದಲ್ಲಿಯೇ

ನಡೆಯಲು ಸಾಧ್ಯವಾಗುತ್ತಿರುವುದು ಇವೆಲ್ಲ ಕಾಕತಾಳೀಯ ಎಂದು ಸುಮ್ಮನಿರೋಣವೇ ? ಸುಂದರಿಯರ ಆಯ್ಕೆಯ ಹೆಸರಿನಲ್ಲಿ ಸೌಂದರ್ಯ ಉದ್ಯಮ — ಸೆಕ್ಸ್ ಉದ್ಯಮವನ್ನು ಬೆಳೆಸಲು ಪ್ರಯತ್ನ ನಡೆಯುತ್ತಿದೆ.

ಬದುಕಿನ ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು, ಉದ್ಯೋಗಗಳಿಗೆ ಕನಿಷ್ಠ ವೇತನದಂತಹ ಕಾನೂನುದತ್ತ ಸೌಲಭ್ಯಗಳಿಗೆ ಹೋರಾಡುತ್ತಿರುವಾಗ ರಾಜ್ಯದಲ್ಲಿ ವಿದ್ಯುತ್ ಅಭಾವದಿಂದ ಎಲ್ಲ ವಿಭಾಗದ ಜನ ಕಂಗಾಲಾಗಿರುವಾಗ ಜನಪರ ಯೋಜನೆಗಳತ್ತ ಗಮನ ಹರಿಸುವ ಬಗ್ಗೆ ಲಕ್ಷ್ಯ ಹರಿಸದೇ ಪಟೇಲರ,ದೇವೇಗೌಡರ ಸರ್ಕಾರ ಅಮಿತಾಬ್ ಬಚ್ಚನ್ ಕೃಪಾಪೋಷಿತ ಮಿಸ್ ವರ್ಲ್ಡ್ ಸ್ಪರ್ಧೆ ನಡೆಸಲು ಹೊರಟಿದೆ. ಬಹುರಾಷ್ಟ್ರೀಯ ಕಂಪನಿಗಳಿಗೆ ದೇಶದ ಬಾಗಿಲನ್ನು ಪೂರ್ಣ ತೆರೆದಿಟ್ಟು, ಮುರ್ಡೋಕ್‌ನಂತಹ ಮಾಧ್ಯಮ ದೊರೆಯನ್ನು ಬೆಂಗಳೂರಿಗೆ ಬಂದು ನೆಲೆಯೂರಲು ಅವಕಾಶ ನೀಡ ಹೊರಟ ಹಿನ್ನೆಲೆಯಲ್ಲಿ ಈ ಅವಕಾಶವನ್ನು ನಮ್ಮ ಸರ್ಕಾರ ಪಡೆದಿದೆ.

ಆದರೆ ಮಹಿಳಾ ಸಮಾನತೆಯನ್ನು ಗೌರವಿಸುವ, ದೇಶದ ಸ್ವಾತಂತ್ರ್ಯ, ಸಾರ್ವಭೌಮತೆಯನ್ನು ಬಯಸುವ ಸಮಾನ ಮನಸ್ಕರು ಒಂದಾಗಿ "ಸ್ಪರ್ಧೆ" ಮತ್ತದರ ದುರುದ್ದೇಶವನ್ನು ಪ್ರತಿಭಟಿಸಬೇಕಾಗಿದೆ.

●

*Reg No MAG (5) PRC, DEGL 036/86/87*
BOOK-POST/Periodicals

To,

*If undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar II Stage, Bangalore-40
Pin-560 040